ಯಿರುವುದು ಸರಿಯಷ್ಟೆ. ಶ್ರೀಮದ್ಭಗವದ್ಗೀತೆಯಂತೆ ಶ್ರೀ ರೇಣುಕಗೀತೆಗೂ ಶಬ್ದಾರ್ಥಗಳಿಂದ ಕೂಡಿದ ಶ್ಲೋಕಾರ್ಥಗಳ ಭಾಷ್ಯರಚನೆ ವರ್ತಮಾನ ಕಾಲದ ಮಾನವಧರ್ಮದ ಹಾಗೂ ಮಾನವ ಜನಾಂಗದ ಕ್ಷೇಮಾಭ್ಯುದಯಾದಿ ಗಳ ದೃಷ್ಟಿಯಿಂದ ಅತ್ಯಾವಶ್ಯಕವೆನಿಸಿರುವುದು. ಆದಿ ಜ|| ಶ್ರೀ ರೇಣುಕಾ ಗಸ್ತ್ಯರ ಸಂವಾದ ಪದಲಾಲಿತ್ಯಗಳಿಂದ ರಾಮಣೀಕಯುವೆನಿಸಿ, ಕರ್ಮದುರಿತ ಹರವೂ ಪಾವನಾತಿ ಪಾವನವೂ ಆಗಿರುವುದು. ಮೂಲ ಶ್ಲೋಕಗಳಿಗೆ ತಾತ್ಪರ್ಯವಿರುವ ಗ್ರಂಥಗಳೇ ಸದ್ಯ ಎಲ್ಲೆಲ್ಲೂ ಕಂಡುಬರುತ್ತಿರುವುವು. ಕೇವಲ ತಾತ್ಪರ್ಯದಿಂದ ಮೂಲ ಶ್ಲೋಕಗಳ ಅಂತರಾರ್ಥಗಳು ತೋರಬೀಲುವಂತಿಲ್ಲ. ಸಂಸ್ಕೃತದ ಈ ಶಬ್ದಾರ್ಥಗಳನ್ನು ಓದುಗರು, ಮುಮುಕ್ಷುಗಳೂ ಹಾಗೂ ಸಂಸ್ಕೃತ ಜ್ಞಾನವಿಲ್ಲದ ಧರ್ಮಾಸಕ್ತಿಯುಳ್ಳ ಜಿಜ್ಞಾಸುಗಳೂ ಸ್ವತಃ ಅರ್ಥ ಮಾಡಿಕೊಂಡು ಶ್ಲೋಕಾಂತರ್ಗತವಾದ ತತ್ವದ ಸುಧಾಮೃತಪಾನವನ್ನು ಮಾಡಿ, || ತಮಸೋ ಮಾ ಜ್ಯೋತಿರ್ಗಮಯ | ಮೃತ್ಯೋರ್ಮಾ ಅಮೃತಂ ಗಮಯ|| ಎಂಬ ಶೃತಿವಾಣಿಯಂತೆ, ಅಸತ್ತಿನಿಂದ ಸತ್ ಸ್ವರೂಪದತ್ತ, ಕಗ್ಗತ್ತಲಿನಿಂದ ಪರಂಜ್ಯೋತಿಯತ್ತ, ಹಾಗೂ ಮೃತ್ಯುವಿನ ದವಡೆಯಿಂದ ಅಮೃತತ್ವದತ್ತ ಮಾನವರು ಸಾಗಿ, ಪುನರಪಿರಾಹಿತ್ಯವಾದ ಮತ್ತು ಸರ್ವ ದುಃಖ ನಿವೃತ್ತಿ ಪರಮಾನಂದ ಪ್ರಾಪ್ತಿಯನ್ನು ಈ ಜನ್ಮದಲ್ಲಿಯೇ ಸಾಧಿಸಬೇಕಾದದು ಪ್ರತಿಯೊಬ್ಬರ ಆದ್ಯ ಕರ್ತವ್ಯವೆನಿಸಿರುವುದು.

## A Spiritual call with Supplication.

**ಪೂಜ್ಯ ಪಾದಂಗಳವರಲ್ಲಿ ಮತ್ತು ಪಂಡಿತ ಮಂಡಲಿಯುವರಲ್ಲಿ ಭಯ ಭಕ್ತಿ ವಿನಮ್ರ ಭಾವದಿಂದ ಹಾಗೂ ಅನಂತ ಪ್ರಣಾಮಂಗಳ ಪೂರ್ವಕ ಬಿನ್ನೈಸಿಕೊಳ್ಳುವುದೇನಂದರೆ.**

|| ಕೂಜಂತಂ ಶಿವ ಶಿವೇತಿ | ಮಧುರಂ ಮಧುರಾಕ್ಷರಂ |
ಆರುಹ್ಯ ಕವಿತಾ ಶಾಖಾಂ | ವಂದೇ ಶ್ರೀ ಶಿವಯೋಗಿ ಶಿವಾಚಾರ್ಯ ಕೋಕಿಲಂ ||

ಇಂದು "ರೇಣುಕ ಭಾಷ್ಯ ಮತ್ತು ದಾರುಕ ಭಾಷ್ಯಗಳು" ನಮಗೆ ಹಸ್ತಗತವಾಗಿಲ್ಲ. "ನೀಲಕಂಠ ಭಾಷ್ಯ ಹಾಗೂ ಶ್ರೀಕರಭಾಷ್ಯ, ಶಿವಾದ್ವೈತ ಮಂಜರಿ" ಮೊದಲಾದ ಮಹರ್ಘ ಕೃತಿಗಳು, ಶ್ರೀಸಿದ್ಧಾಂತ ಶಿಖಾಮಣಿ

ಪ್ರೋಕ್ತ ಶೈವ ಸಿದ್ಧಾಂತದ ಆಧಾರದ ಮೇಲೆ ತಂತಮ್ಮ ಪ್ರಭಾವಗಳನ್ನು ಬೀರುತ್ತ ವಿಶ್ವಧರ್ಮವೆನಿಸಿದ ಶಿವಾದ್ವೈತ ಸಿದ್ಧಾಂತವನ್ನು ಅರ್ಥಾತ್ ಷಟ್ಸ್ಥಲ ಸಿದ್ಧಾಂತವನ್ನು ಉಜ್ವಲವಾಗಿ ಪ್ರತಿಪಾದಿಸುತ್ತಲಿವೆ. ಇದರಿಂದ ಶ್ರೀ ಶಿವ ಸಿದ್ಧಾಂತ ಶಿಖಾಮಣಿಗೆ ಸರ್ವತೋಮುಖವಾದ ಭಾಷ್ಯಗಳನ್ನು ರಚಿಸಿ, ಪ್ರಕಟಿಸಿ, ಸ್ವತಃ ಅರಿತು ಆಚರಿಸಿ, ಆನಂದಿಸಿ, ಭೂಮಂಡಲದ ದಶ ದಿಕ್ಕುಗಳಲ್ಲೂ ಪ್ರವಚನ, ಪಠನ ಪಾರಾಯಣಾದಿಗಳ ಮೂಲಕ ಪ್ರಚಾರ ಮಾಡಿ, ಅಶಾಂತಿಯುತವಾದ ಜಗತ್ತು ಪರಮ ಶಾಂತಿಯನ್ನು ನೀಡುವ ಜ್ಞಾನ ಯಜ್ಞದಲ್ಲಿ ತತ್ಪರವಾದರೆ, ಆಗ ಜಗದಾದಿ ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರುಗಳಿಂದ ಆಗಮಾಮ್ನಾಯಾದಿಗಳಿಗೂ ಹಾಗೂ ಪ್ರಸ್ಥಾನ ತ್ರಯಗಳ ತತ್ವಗಳನ್ನೊಳಗೊಂಡಂತೆ ರಚಿಸಿದ ರೇಣುಕ ಭಾಷ್ಯ, ದಾರುಕ ಭಾಷ್ಯಾದಿಗಳು ನಮಗೆ ಪ್ರಾಪ್ತವಾದಷ್ಟೆ ಸಂತೋಷವುಂಟಾಗುವುದರಲ್ಲಿ ಯಾವ ಸಂಶಯವೂ ಇಲ್ಲ.

ಪ್ರಸ್ಥಾನತ್ರಯಗಳಿಗೆ, ಭಗವತ್ಪಾದರುಗಳಾದ ಆದಿ ಶ್ರೀ ಶಂಕರಾ ಚಾರ್ಯರೂ, ಶ್ರೀ ರಾಮಾನುಜಾಚಾರ್ಯರೂ, ಶ್ರೀಮನ್ಮಧ್ವಾಚಾರ್ಯರೂ ತದನಂತರ ಪೂಜ್ಯಪಾದರ ಪರಂಪರೆಯಲ್ಲಿ ಬಂದ ಅನೇಕ ಪೀಠಾಚಾರ್ಯರು ಗಳೂ, ಉಪಾಚಾರ್ಯರುಗಳೂ, ಯತಿಗಳೂ, ಪಂಡಿತರೂ ಹಾಗೂ ಪ್ರಾಜ್ಞರೂ, ಧಾರ್ಮಿಕ, ಸಾಮಾಜಿಕ ಮತ್ತು ರಾಜಕೀಯ ಮೊದಲಾದ ಎಲ್ಲಾ ಕ್ಷೇತ್ರಗಳಲ್ಲಿರುವವರು ಅನೇಕ ಭಾಷೆಗಳಲ್ಲಿ ಕಾಲಕಾಲಕ್ಕೆ ಮಹೋನ್ನತವಾದ ಭಾಷ್ಯಾದಿಗಳನ್ನು ರಚಿಸಿ, ಸರ್ವತ್ರ ವಿಜೃಂಭಣೆಯಿಂದ ಪ್ರಚಾರ ಮಾಡುತ್ತ ಲಿರುವುದು ಸರ್ವವಿದಿತವೇಯಿರುತ್ತೆ. ಅದರಂತೆ, ಶ್ರೀ ರೇಣುಕ ಗೀತೆಗೂ, ಭಗವದ್ಗೀತೆಯ ತರದಲ್ಲಿ ಪರಮ ಪೂಜ್ಯ ಮಹಾ ಪಾದಂಗಳವರೂ, ಉಪಾಚಾರ್ಯರೂ, ವಿರಕ್ತ ಮತ್ತೂ ಗುರುವರ್ಗದ ಮಹಾ ಸನ್ನಿಧಾನಂಗಳ ರವರೂ, ಶಿವಾದ್ವೈತ ವಿದ್ವಾಂಸರೂ, ಸಮಸ್ತ ಲಿಂಗಾಂಗಿಗಳಾದ ಪಂಡಿತರೂ ಹಾಗೂ ಶಿವಾನುಭಾವಿಗಳೂ, ಪ್ರಾಜ್ಞರಾದ ಎಲ್ಲಾ ಧೀಮಂತ ಗೃಹಸ್ಥರೂ, ನವ ನವೋಲ್ಲಾಸಕರ ಸದ್ಭಾವದಿಂದ, ಗಹನವೂ ಗಂಭೀರವೂ ಆದ ಭಾಷ್ಯಾದಿ ಗಳನ್ನು, ದಕ್ಷಿಣ ಭಾರತದ ಮೂಲೆ ಮೂಲೆಗಳಲ್ಲಿ ಸರ್ವಧರ್ಮ ಸಮನ್ವಯ ದೃಷ್ಟಿಯಿಂದ, ಅವಿರೋಧ ಭಾವದಿಂದ, ಆ ಆಪ್ರಾಂತೀಯ ಭಾಷೆಗಳೊಂದಿಗೆ ಆಂಗ್ಲ ಭಾಷೆಯಲ್ಲೂ ವಿಶಾಲಾರ್ಥ ಗರ್ಭಿತವಾದ ಶೈಲಿಯಲ್ಲಿ ರಚಿಸಿ, ಆ ತತ್ವದ ಸುಧೆಯನ್ನು ತಾವುಂಡು ಜಗತ್ತಿನವರಿಗೆ ತ್ಯಾಗ ಮನೋಭಾವದಿಂದ

ಷಟ್‌ಸ್ಥಲ ಸಿದ್ಧಾಂತವ ಮಹಾ ಪಕ್ವರಸಪದ ರಸಪೌಷ್ಟಿಕಣವೂಟವನ್ನು ವಿಶ್ವಾಸದಿಂದ ಉಣಬಡಿಸಬೇಕೆಂದು ಈ ಗ್ರಂಥಕರ್ತೃನ ಆಶಯ. ಜ|| ಶ್ರೀ ರೇಣುಕಾಚಾರ್ಯರು ಮೇಲ್ಕಂಡಂಶವನ್ನೇ ಸರ್ವ ಸಮರ್ಥರಾದ ಆದಿ ಶ್ರೀ ಅಗಸ್ತ್ಯ ಮಹರ್ಷಿಗಳಿಗೆ ಅರುಹುತ್ತಾ

|| ಸ್ಥಾಪ್ಯತಾಂ ಸರ್ವಲೋಕೇಷು । ತಂತ್ರಮೇ ತತ್ವಯಾ ಮುನೇ ।
ಈದೃಶಂ ಶಿವಬೋಧಸ್ಯ । ಸಾಧನಂ ನಾಸ್ತಿ ಕುತ್ರಚಿತ್ ||

(ಸಿ. ಶಿ. ಅ 20 ಶ್ಲೋ 74)

ಎಂಬುದಾಗಿ ಆಜ್ಞಾಪಿಸಿರುವರು. ಈ ಆಜ್ಞೆ ವಿಶೇಷತಃ ಸಮಸ್ತರಿಗೂ ಎಲ್ಲಾ ಕಾಲಕ್ಕೂ ಅನ್ವಯಿಸುವಂಥಾ ಜೀವಂತ ಆಜ್ಞೆಯೆಂದು ವಿರಾಜಿತವಾಗಿರುವ ಮಹದಂಶ ಸಂಸ್ಮರಣೀಯವಿರುತ್ತೆ.

## In three Parts ಮೂರು ಭಾಗಗಳಾಗಿ.

21 ಪರಿಚ್ಛೇದಗಳಿಂದ ವಿರಾಜಿಸುವ ಶ್ರೀ ರೇಣುಕಾಗಸ್ತ್ಯ ಸಂವಾದವೆಂಬೀ ಶ್ರೀ ರೇಣುಕ ಗೀತೆಯನ್ನು, ಓದುಗರ, ಜಿಜ್ಞಾಸುಗಳ ಸೌಲಭ್ಯಕ್ಕಾಗಿ ಪ್ರತಿ ಏಳು ಪರಿಚ್ಛೇದಗಳಿಗೆ ಒಂದು ಭಾಗದಂತೆ, ಮೂರು ಭಾಗಗಳಾಗಿ ವಿಂಗಡಿಸಿ ಕನ್ನಡ ಆಂಗ್ಲ ಭಾಷೆಗಳಲ್ಲಿ ಸೇರಿದಂತೆ ಭಾಷ್ಯವನ್ನು ರಚಿಸುವುದು ಅತ್ಯುತ್ತಮವೆನಿಸಿರುವುದು. ಒಂದೇ ಪರಿಶ್ರಮದಲ್ಲಿ ಎರಡೂ ಭಾಷೆಗಳಲ್ಲಿ ಭಾಷ್ಯ ರಚನೆಗೈಯ್ಯುವುದರಿಂದ, ಭುವನಾಚಾರ್ಯರ ಘನತತ್ವಾಮೃತವನ್ನು ಪ್ರಥಮ ಭಾರಿಗೆ ಭುವನಾಂಡದಾದ್ಯಂತ ಯಥಾ ಶಕ್ತಿ ಭಕ್ತಿ ಪುರಸ್ಸರಭಾವದಿಂದ ಪ್ರಚಾರಗೈದ ಮಹಾ ಪುಣ್ಯ ಲಭಿಸುವುದರಲ್ಲಿ ಸಂದೇಹವೇ ಇಲ್ಲವಷ್ಟೆ.

ಕೈಲಾಸಪತಿಯಾದ ಶ್ರೀ ಉಮೇಶನ ಸ್ವಮುಖ ಕಮಲದಿಂದ ಪ್ರಥಮ ಭಾರಿಗೆ ಶ್ರೀ ಗಿರಿಜೆ, ಷಣ್ಮುಖಸ್ವಾಮಿಗೆ ಉಪದೇಶಿಸಿದ ವಿಶ್ವಧರ್ಮವೆನಿಸಿದ ಷಟ್ಸ್ಥಲ ಸಿದ್ಧಾಂತವನ್ನು ಅರ್ಥಾತ್ ಶಿವಾದ್ವೈತ ದರ್ಶನವನ್ನು, ಶ್ರೀ ಪರಮೇಶ್ವರನ ಸದ್ಯೋಜಾತ ಮುಖಸಂಭೂತರೂ, ಭುವಿಯಲ್ಲಿ ಪಂಚಜ್ಯೋತಿರ್ಲಿಂಗಗಳ ಮುಖಗಳಿಂದ ಸಾಕ್ಷಾತ್ ಉದ್ಭವಿಸಿದವರೂ ಆದ—

|| ಏತೇ ಯುಗಚತುಷ್ಕೇಷು । ಪಂಚಾಚಾರ್ಯಾಃ
ಯಥಾ ವಿಧಿಃ । ಮಮಲಿಂಗ ಮುಖೋದ್ಭೂತಾಃ ।
ಲೋಕ ವಿಶ್ರುತ ಕೀರ್ತಯಃ ||

ಎಂಬ ಶಿವಾಗಮುಗಳ, ಯಜುರ್ವೇದಾಂತರ್ಗತವಾದ ವೀರಲೈಂಗ್ಯೋಪನಿಷತ್ತಿನ ಹಾಗೂ ಶ್ರೀ ವ್ಯಾಸಾಚಾರ್ಯ ಪ್ರೋಕ್ತ ಮಹಾಸ್ಕಾಂದಾದಿಗಳ ಪರಮ ಶ್ರೇಷ್ಠ ಆಧಾರಗಳನ್ನೊಳಗೊಂಡಂತೆ, ಚತುರ್ಯುಗಂಗಳ ಆದಿಯಲ್ಲಿ ಮೇಲುಕ್ತವಾದಂತೆ ಇಚ್ಛಾ ಮಾತ್ರದಲ್ಲಿ ದೈವಲೀಲೆಗನುಸಾರ ದಿವ್ಯ ದೇಹ ಧಾರಿಗಳಾಗಿ ಶಿವ ಪ್ರೋಕ್ತವಾದ ಶಿವಾದ್ವೈತ ಮಹಾತತ್ವವನ್ನು ಜಗದಾದಿ ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರುಗಳು ; ಮಹರ್ಷಿಕುಲ ತಿಲಕರೂ, ಶಾಪಾನುಗ್ರಹ ಶಕ್ತಿ, ಸಮರ್ಥರೂ, ತ್ರಿಕಾಲಜ್ಞಾನಿಗಳೂ, ತ್ರಿಲೋಕ ಸಂಚಾರಿಗಳೂ, ಆಗಿ ಭಾಷ್ಯಕರ್ತರಾದ ಆದಿ ಶ್ರೀ ಶಂಕರ, ಶ್ರೀ ರಾಮಾನುಜ, ಶ್ರೀಮನ್ಮಧ್ವಾಚಾರ್ಯರೂ, ಹಾಗೂ ಅನಂತ ಮಹಾ ಮಹಿಮರಿಂದ ಸ್ತುತ್ಯರೆನಿಸಿದ, ಆದಿ ಶ್ರೀ ಅಗಸ್ತ್ಯ ಮಹರ್ಷಿಗಳು, ಶ್ರೀದಧೀಚಿ ಶ್ರೀ ವ್ಯಾಸಾಚಾರ್ಯರು, ಶ್ರೀ ಸಾನಂದ ಮತ್ತೂ ಶ್ರೀ ದೂರ್ವಾಸಾದಿ ಮಹರ್ಷಿಗಳು ಕ್ರಮವಾಗಿ ಆದಿ ಜ॥ ಶ್ರೀ ರೇಣುಕಾಚಾರ್ಯ, ದಾರುಕ, ಘಂಟಾಕರ್ಣ, ಧೇನುಕರ್ಣ ಹಾಗೂ ಶ್ರೀ ವಿಶ್ವಾರಾಧ್ಯ ಜಗದ್ಗುರು ಸಾರ್ವಭೌಮರ ದಿವ್ಯ ಕೃಪಾಲವಲೇಶದಿಂದ ಪ್ರದೀಪ್ತರಾಗಿ, ಮಹಾಚಾರ್ಯವರೇಣ್ಯರುಗಳಿಂದ ಶಿವದೀಕ್ಷೆಯನ್ನು ಪಡೆದು ಮೇಲ್ಕಂಡ ಸರ್ವೋತ್ತಮೋತ್ತಮವಾದ, ಹಾಗೂ ॥ ಲಿಂಗಾಂಗ ಸಂಗಿನೋವತ್ಸ । ಪುನರ್ಜನ್ಮ ನ ವಿದ್ಯತೆ ॥ ಎಂಬ ಶಿವಾಗಮೋಕ್ತಿಗನುಗುಣವಾದ ಶಿವ ಸಿದ್ಧಾಂತವನ್ನು ನೇರವಾಗಿ ಶ್ರೀ ಪಂಚಮಹಾಚಾರ್ಯರುಗಳಿಂದ ಶ್ರವಣಮಾಡಿ ॥ ನಿಜ ಪದಂ ಕರಬಿಲ್ವ ಫಲಂ ॥ ಎಂಬಂತೆ ಘನಲಿಂಗ ಶಿವಯೋಗದಲ್ಲಿ ವಿಲೀನರಾಗಿ ಪರಂಜ್ಯೋತಿಮಯರಾಗಿ ಬೆಳಗುತ್ತಲಿರುವರು. ಅಂತೆಂದ ಬಳಿಕ, ವಿಶ್ವಾದ್ಯಂತ ಅಖಿಲ ಲಿಂಗಾಂಗಿಗಳು ಈ ಷಟ್ಸ್ಥಲ ಸಿದ್ಧಾಂತವನ್ನು ಭಗೀರಥ ಪ್ರಯತ್ನದಿಂದ ಅನೇಕ ಭಾಷೆಗಳಲ್ಲಿ ಅಮೃತಮಯವಾದ ಭಾಷ್ಯಗಳನ್ನು ರಚಿಸಿ ಸತತ ಜಗದಾದ್ಯಂತ ಪ್ರಚಾರಮಯ ದಿವ್ಯಜ್ಞಾನ ಯಜ್ಞವನ್ನು ಹೂಡಿ ಮಹೋಜ್ವಲ ಭಕ್ತಿ ಭಾವದಿಂದ ಪ್ರಜ್ವಲಗೊಳಿಸಲು ಕಂಕಣಬದ್ಧರಾಗಿ ಮುಂದೆ ಬಂದು ಇಹ ಪರಗಳಿಗೆ ಮಾರ್ಗದರ್ಶಕರಾಗಿ ನಿಲ್ಲಬೇಕೆಂದು ವಿನಯಪೂರ್ವಕವಾಗಿ ಅಖಿಲ ಲಿಂಗಾಂಗಿಗಳಲ್ಲಿ ಅಂಜಲಿಪುಟದಿಂದ ಪ್ರಾರ್ಥಿಸುತ್ತೇನೆ.

ಶ್ರೀ ಶಿವ ಸಿದ್ಧಾಂತ ಶಿಖಾಮಣಿ ಮಹಾಗ್ರಂಥದ ಶ್ಲೋಕಗಳಲ್ಲಿ ಅಲ್ಲಲ್ಲಿ ಕಂಡುಬರುವ ಕೆಲವು ಶಾಸ್ತ್ರಾರ್ಥ ಗರ್ಭಿತವಾದ ಶಬ್ಧಗಳಿಗೆ, ವಿಸ್ತಾರವಾದ ವ್ಯಾಖ್ಯಾನವನ್ನು ಬರೆಯುವಾಗ, ಸರ್ವ ಧರ್ಮ ಸಮನ್ವಯ ಭಾವದಿಂದ ಆಗ

ಮ್ನಾಮ್ನಾಯಾದಿಗಳ, ಪ್ರಸ್ಥಾನತ್ರಯಂಗಳ, ವಚನೋಪನಿಷತ್ತುಗಳಲ್ಲಿ ಆ ಬಗ್ಗೆ ಪ್ರೋಕ್ತವಾದ ಉಜ್ವಲ ಅಂಶಗಳನ್ನು ಸಂಗ್ರಹವಾಗಿ ಹಾಗೂ ಸರ್ವಾಂಗ ಸುಂದರವಾದ ಶೈಲಿಗಳಲ್ಲಿ ಉಭಯ ಭಾಷೆಗಳಲ್ಲೂ ಅನುಭವೈಕ್ಯವೇದ್ಯ ವಿದ್ವದ್ ಶೈಲಿಯಲ್ಲಿ ಸರಳವಾಗಿ ರಚಿಸಿ, ಜಗತ್ತಿನ ಸಮಸ್ತ ಆಸ್ತಿಕ ಜನಸ್ತೋಮ, ಪರ ಮಾದರದಿಂದ ಓದಿ ಅನುಭವ ಪಡೆಯಲು ಅನುಕೂಲವಾಗಿರುವಂತೆ ವಿಶಾಲಾರ್ಥ ಗರ್ಭಿತವಾಗಿ ಭಾಷ್ಯ ರಚನೆಯನ್ನು ಮಾಡಬೇಕೆಂದು ಸವಿನಯ ಪ್ರಾರ್ಥನೆ. ದಯಾಮಯರಾದ ಪರಮ ಪೂಜ್ಯ ಪೀಠಾಧಿಪತಿಗಳೂ, ಮಠಾಧಿಪತಿಗಳೂ, ವಿಚಕ್ಷಣ ಸಂಪನ್ನರಾದ ಶಿವಾದ್ವೈತ ಘನ ವಿದ್ವಾಂಸರೂ, ಪಂಡಿತೋತ್ತಮರು, ಆಧ್ಯಾತ್ಮಿಕ ತತ್ವ ಪ್ರಚಾರದ ಸಂಘ ಸಂಸ್ಥೆಗಳೂ, ಪ್ರಮುಖ ವಿಶ್ವವಿದ್ಯಾನಿಲಯಗಳವರೂ ಜಗದಾಚಾರ್ಯ ಸಾರ್ವಭೌಮ ಶ್ರೀ ರೇಣುಕಾಚಾರ್ಯರ ಆದೇಶದಂತೆ ಜಗತ್ಕಲ್ಯಾಣಾರ್ಥ ಅಲ್ಲಲ್ಲಿ ಸ್ವಯಂ ಪ್ರೇರಿತರಾಗಿ ನೂರಾರು ಭಾಷ್ಯಗಳನ್ನು ಜನ್ಮಸಾರ್ಥಕತೆಗಾಗಿ ಅಮೋಘವಾಗಿ ರಚಿಸಿ, ಸಹಸ್ರಗಟ್ಟಲೆ ಗ್ರಂಥಗಳನ್ನು ಪ್ರಕಟಿಸಿ, ಆ ಮಹಾ ತತ್ವವನ್ನು ಭಾನು ಕೋಟಿ ಪ್ರಕಾಶಮಾನವಾಗಿ ಅಷ್ಟ ದಿಕ್ಕುಗಳಲ್ಲೂ ಪಾವನವಾದ ಗಂಗಾ ಪ್ರವಾಹದಂತೆ ಈ ಭಾಷ್ಯ ವ್ಯಾಪಿಸಿ ಈ ದೇವಗಂಗೆ ಸರ್ವರ ಹೃದಯ ಭೂಮಿಕೆಯಲ್ಲಿ ಪ್ರವಹಿಸಿ, ತತ್ಫಲವಾಗಿ ಅವರವರ ಹೃನ್ಮಂದಿರಗಳನ್ನು ॥ ಸರ್ವ ಹೃದಯ ಪ್ರಕಾಶಃ ॥ ಎಂಬಂತೆ ಒಳ ಹೊರಗೆ ಬೆಳಗುವಂತೆ ಮಾಡುವ ಮಹಾ ಪ್ರಯತ್ನದಿಂದ ಕೃತ ಕೃತ್ಯರಾಗಬೇಕೆಂದು ಭಕ್ತಿ ಭಾವದಿಂದ ಪ್ರಾರ್ಥಿಸುತ್ತೇನೆ. ॥ ದೀಪೋ ದೀಪಃ ಪ್ರದೀಪನ್ನಃ ॥ ಎಂಬಂತೆ ಅಸಂಖ್ಯಾತ ಮಹನೀಯರು ಈ ಜ್ಞಾನ ಯಜ್ಞದಲ್ಲಿ ತ್ಯಾಗ ಮನೋಭಾವದಿಂದ ತಾವಾಗಿ ಸ್ವಾತ್ಮಪ್ರೀತಿಪುರಸ್ಸರ ಭಾವದಿಂದ ಮುಂದೆ ಬಂದು, ಸರ್ವತೋಮುಖವಾಗಿ ಶ್ರೀ ರೇಣುಕ ಗೀತೆಗೆ ಕನ್ನಡ ಆಂಗ್ಲ ಭಾಷೆಗಳಲ್ಲಿ ವಿಸ್ತಾರವಾದ ಭಾಷ್ಯಗಳ ರಚನೆ, ಪ್ರಕಟನೆ ಮತ್ತೂ ಪ್ರಚಾರ ಕಾರ್ಯಗಳಲ್ಲಿ ತ್ರಿಕರಣಪೂರ್ವಕ ಶ್ರಮಿಸಿ, ದಯಾಮಯರಾದ ಭಗವತ್ಪಾದ ಜಗದಾದಿ ಶ್ರೀ ೧೦೦೮ ಜಗದ್ಗುರು ರೇಣುಕಾದಿ ಪಂಚಾಚಾರ್ಯರುಗಳ ಕೃಪಾಶೀರ್ವಾದಂಗಳಿಗೆ ಪಾತ್ರರಾಗಬೇಕೆಂದು ನಮ್ರಭಾವದಿಂದ ಬಿನ್ನೈಸಿಕೊಳ್ಳುತ್ತೇನೆ.

ಗುರುಕುಲಗಳಲ್ಲೂ, ವೀರಶೈವ ಮಠ ಮಂದಿರಗಳಲ್ಲೂ, ವಿದ್ಯಾರ್ಥಿಗಳ ನಿಲಯಗಳಲ್ಲೂ (ಹಾಸ್ಟಲ್‌ಗಳಲ್ಲೂ) ಅನಂತ ಸಂಘ ಸಂಸ್ಥೆಗಳಲ್ಲೂ ವಿಶೇಷತಃ ಲಿಂಗಾಂಗಿಗಳ ಮಧ್ಯೆ ಈ ಭಾಷ್ಯಾಮೃತದ ಪಠನೆ, ಪಾರಾಯಣ, ಶ್ರವಣ,

ಪ್ರವಚನಗಳನ್ನು ಏರ್ಪಡಿಸಿ, ವಿಶ್ವ ವ್ಯಾಪಕವಾಗಿ ಈ ಧರ್ಮ ಪ್ರಚಾರವಾಗಿ, ಜನತೆ ಇದರಿಂದ ಸಂಪ್ರೀತರಾಗುವಂತೆ ಮಾಡುವುದು ಆದ್ಯಕರ್ತ್ಯವ್ಯವೆನಿಸಿರುತ್ತೆ. ಭಗವತ್ಪಾದ ಆದಿ ಜ|| ಶ್ರೀ ರೇಣುಕಾಚಾರ್ಯರ ಆಶಯವೂ ಇದೇ ಆಗಿರುತ್ತೆ.

ಮೂಲ ಪೀಠಗಳಲ್ಲೂ, ಶಾಖಾ ಸಂಸ್ಥಾನ ಮಠಗಳಲ್ಲೂ ಬ್ರಹ್ಮಚಾರಿ ವಟುಗಳನ್ನು ಶ್ರೀ ರೇಣುಕ ಭಾಷ್ಯದ ಜ್ಞಾನಾನುಭವದಲ್ಲಿ ಪಾರಂಗತರನ್ನಾಗಿ ಮಾಡಿ, ಪ್ರಸ್ಥಾನತ್ರಯಗಳ, ವಚನೋಪನಿಷತ್ತುಗಳ ಅಧ್ಯಯನ ಮಾಡಿಸಿ, ಕನ್ನಡ ಆಂಗ್ಲ ಭಾಷೆಗಳಲ್ಲಿ ಕೋವಿದರನ್ನಾಗಿಯೂ, ವಾಙ್ಮಿಗಳನ್ನಾಗಿಯೂ, ಸರ್ವಧರ್ಮ ಸಹಿಷ್ಣುತಾಭಾವದಿಂದ, ವಿಶ್ವಧರ್ಮ ಪ್ರಚಾರ ಮಾಡುವ ನೈಪುಣ್ಯವನ್ನು ಪಡೆದು ಶಾಂತಿ ಸ್ಥೈರ್ಯಗಳಿಂದ ಸರ್ವತ್ರ ಈ ಧರ್ಮವನ್ನು ಪ್ರಚಾರ ಮಾಡುವ ತೆರದಲ್ಲಿ ವರ್ಷೇ ವರ್ಷೇ ಅನೇಕ ವಿದ್ಯಾರ್ಥಿ, ವಿದ್ಯಾರ್ಥಿನಿಗಳನ್ನು ಸಿದ್ಧಗೊಳಿಸಿ ಅವರಿಗೆ ಪ್ರೋತ್ಸಾಹ ಬೆಂಬಲಗಳನ್ನು ನೀಡಿ ಸಹಕರಿಸಬೇಕು. ಘನಪಂಡಿತರೂ, ಆತ್ಮರತಿಗಳೂ ಈ ಮಹಾ ಜ್ಞಾನ ಯಜ್ಞದಲ್ಲಿ ಭಾಗಿಗಳಾಗಬೇಕು. ಗೃಹಸ್ಥರು ಇದಕ್ಕೆ ಬೆಂಬಲನೀಡಿ ತಾವೂ ಅಧ್ಯಯನ ಮಾಡಿ ಕೃತಕೃತ್ಯರಾಗಬೇಕು. ಪೌರ್ವಾತ್ಯ ಪಾಶ್ಚಿಮಾತ್ಯ ದೇಶಗಳಲ್ಲಿನ ಆಧ್ಯಾತ್ಮ ಕೇಂದ್ರಗಳಿಗೂ, ವಿಶ್ವವಿದ್ಯಾನಿಲಯಗಳಿಗೂ, ಪ್ರಮುಖ ಲೈಬ್ರರಿಗಳಿಗೂ, ಮಠ ಮಂದಿರಗಳಿಗೂ, ಹಾಗೂ ಆತ್ಮವೇತ್ತರಾದ ಘನ ವಿದ್ವಾಂಸರುಗಳಿಗೂ, ಅನೇಕ ಪೂಜ್ಯ ಪೀಠಾಧೀಶ್ವರರುಗಳಿಗೂ ಈ ಗ್ರಂಥಗಳನ್ನು, ಸದರಿ ತತ್ವ ಪ್ರಚಾರ ದೃಷ್ಟಿಯಿಂದ ಉಚಿತವಾಗಿ ಕಳುಹಿಸಿಕೊಟ್ಟು ಈ ಶ್ರೀ ರೇಣುಕಭಾಷ್ಯ ಸರ್ವತ್ರ ಬೆಳಗುವಂತೆ ಮಾಡಬೇಕು. ಒಂದೊಂದು ಮನೆಯಲ್ಲೂ ಪ್ರತಿಯೊಬ್ಬರಲ್ಲೂ ಈ ಗ್ರಂಥ ಅವಶ್ಯ ಪ್ರೇಮಾದರದಿಂದ ಅವರವರು ಪಡೆಯುವ ಮಟ್ಟಕ್ಕೆ ಪ್ರಚಾರ, ಪಾಠ ಪ್ರವಚನಾದಿಗಳು ಸತತ ಜರುಗುತ್ತಿರಬೇಕು.

## ಗ್ರಂತೋತ್ಸವ

ಭಗವತ್ಪಾದ ಆದಿ ಶ್ರೀಮಜ್ಜಗದ್ಗುರು ಸಾರ್ವಭೌಮ ರೇಣುಕ ಪರಂಜ್ಯೋತಿಯ ಮುಖ ಕಮಲದಿಂದ, ಆದಿ ಶ್ರೀ ಅಗಸ್ತ್ಯ ಮಹರ್ಷಿಗಳನ್ನು ವ್ಯಾಜವಾಗಿಟ್ಟುಕೊಂಡು, ಜಗತ್ತಿನ ಸಮಸ್ತ ಮಾನವಕೋಟಿಗೆ ದಯಪಾಲಿಸಿದ ಮಹೋನ್ನತವಾದ ಉಪದೇಶಾಮೃತವೆನಿಸಿದ, ಶ್ರೀ ಸಿದ್ಧಾಂತ ಶಿಖಾಮಣಿ ಮಹಾ ಗ್ರಂಥವನ್ನು, ಆಸ್ತಿಕ ಶಿರೋಮಣಿಗಳಾದ ಸಮಸ್ತರೂ ಪರಮ ಭಕ್ತಿ ಭಾವದಿಂದ ಪಡೆದು, ತಂ ತಮ್ಮ ಆತ್ಮೋಧ್ಧಾರ ಹಾಗೂ ಶ್ರೇಯಸ್ಸಿನ

ನಿಮಿತ್ತ ಅವಶ್ಯ ನಿತ್ಯವೂ ಓದಬೇಕು. ಶ್ರೀ ಜ|| ಪಂಚಾಚಾರ್ಯರ ಮತ್ತು ಅನೇಕ ಮಹಾ ಶಿವಶರಣ ಶರಣೆಯರ ಜಯಂತ್ಯುತ್ಸವಗಳನ್ನು ಅಲ್ಲಲ್ಲಿ ನೆರವೇರಿಸುವಾಗ ಸದರಿ ಮಹಾ ಗ್ರಂಥದ ಅಯಿಮ ಪ್ರತಿಗಳನ್ನು ಪಂಚ ಜಗದ್ಗುರು ಮಹಾ ಪೀಠಗಳ ಧರ್ಮಧ್ವಜಗಳಿಗೆ ಅನ್ವಯಿಸಿದಂಥಾ ಪಂಚವರ್ಣದ ಶಿಲ್ಕು ಬಟ್ಟೆಯಲ್ಲಿ ಬೈಂಡು ಮಾಡಿಸಿ ಅಲಂಕೃತವಾದ ಪುಷ್ಪಮಂಟಪದಲ್ಲಿಟ್ಟು, ಈ ಗ್ರಂಥಗಳನ್ನು ಮೆರವಣಿಗೆಯಿಂದ ರಾಜವೀದಿಗಳಲ್ಲಿ ಉತ್ಸವ ಮಾಡಬೇಕು. ಹೀಗೆ ಮಾಡುವುದರಿಂದ ಪಾಮರ ಜನತೆಗೂ ಈ ಮಹಾ ಗ್ರಂಥದಲ್ಲಿ ಭಕ್ತ್ಯಾದರಗಳು ಸ್ವಯಂ ಉದ್ಭವಿಸಿದಂತಾಗಿ ಗುರುವರೇಣ್ಯರ ಕೃಪಾ ದೃಷ್ಟಿಗೆ ಪಾತ್ರರನ್ನಾಗಿ ಮಾಡಿದ ಪುಣ್ಯದ ರಾಶಿ ನಮ್ಮದಾಗುವುದು.

ಭುವನಾಚಾರ್ಯವರೇಣ್ಯರೂ, || ಪೂಜ್ಯಾಯ ರೇಣುಕೇಂದ್ರಾಯ | ಸತ್ಯ ಧರ್ಮ ರತಾಯಚ || ಭಜತಾಂ ಕಲ್ಪವೃಕ್ಷಾಯ | ನಮತಾಂ ಕಾಮಧೇನವೇ || ಅನನ್ಯ ಭಕ್ತಿ ಭಾವದಿಂದ ಸತತ ಭಜಿಸುವ ಜನಸ್ತೋಮಕ್ಕೆ ಕಾಮಧೇನುವಿನಂತೆ; || ಅಭಯದಂ ಕರುಣಾ ಭರಣಂ ಶಿವಂ || ಎಂದಂತೆ || ಗುರು ಸಾಕ್ಷಾತ್ಪರಬ್ರಹ್ಮ || ವೆನಿಸಿರುವುದರಿಂದ, ಅವರ ಕೃಪಾ ಕಟಾಕ್ಷ ದೀಕ್ಷೆಯಿಂದ ನಮ್ಮ ಅಭೀಷ್ಟಗಳೆಲ್ಲವೂ || ಪುಷ್ಪಮಾಲಾನು ಸಂಘೇಣ ಸೂತ್ರಂ ಶಿರಸಿ ದಾರಯೇತ್ || ಎಂಬ ನ್ಯಾಯಾನುಸಾರೇಣ, ಪರಮಾಚಾರ್ಯರ ಅಡಿದಾವರೆಗಳನ್ನು ನಿರ್ಮಲ ಚಿತ್ತದಿಂದ ಹಾಗೂ ಅವ್ಯಭಿಚಾರಿಣಿ ಭಕ್ತಿಯೋಗದಿಂದ ಧ್ಯಾನ ಧಾರಣೆಗಳಿಂದ ಪೂಜಿಸಿ ಅವರ ಉಪದೇಶಾಮೃತದ ಚಿಂತನೆಯಿಂದಲೂ ಮಹಾಚಾರ್ಯರ ದಿವ್ಯ ಮಂಗಳ ಸ್ವರೂಪದರ್ಶನ ಧ್ಯಾನಾದಿಗಳಿಂದ ನಿಜಕ್ಕೂ ನಮ್ಮ ಸತ್ಸಂಕಲ್ಪಗಳೆಲ್ಲವೂ ಪರಿಪೂರ್ತಿಗೊಳ್ಳುವುವು. ಮಹಾ ಗುರುದೇವನ ಮಹಿಮೆ ಅಸದೃಶವಾದುದು. ಅಂದಬಳಿಕ || ಗುರುರೇವ ಪರಂಬ್ರಹ್ಮ; || ನಾಸ್ತಿ ತತ್ವಂ ಗುರೋಃ ಪರಂ || ಎಂಬ ಶೃತಿವಾಣಿಯಿರುವುದು. ಗುರುತತ್ವ ಗುರುವಿನ ಉಪದೇಶ ರೂಪದಲ್ಲಿ ಪ್ರೈ ತಾಳಿದೆ. ಆದರಿಂದ ಅದು ಸತ್ಯವು ಚಿನ್ಮಯವೂ ಎನಿಸಿ ಆನಂದವನ್ನು ನೀಡುವುದಾಗಿರುವುದು. ಈ ಘನ ತತ್ವವನ್ನು ಶ್ರೀ ಕೃಷ್ಣ ಪರಮಾತ್ಮನು ಭುವಿಯನ್ನು ಬಿಡುವಾಗ್ಗೆ ತನ್ನೊಂದಿಗಿದ್ದ ಸುಕೃತಶಾಲಿಯಾದ ವಿದುರನಿಗೆ ಆತ್ಮೀಯವಾಗಿ ಅರುಹಿ ಶ್ರೀಮದ್ಭಾಗವತ ಮಹಾ ಗ್ರಂಥವನ್ನು ಅನುಗ್ರಹಿಸಿ, "ಸತ್ಯ ಸಂಧನಾದ ವಿದುರಾ! ನನ್ನ ನಿಜಸ್ವರೂಪ ಈ ಶ್ರೀಮದ್ಭಾಗವತದಲ್ಲಿ ಸುಪ್ರಸನ್ನವಾಗಿ ಸತತ ಇರುವುದಾಗಿದೆ, ಆದ್ದರಿಂದ ನಾನೇ ಈ ಮಹಾ ಗ್ರಂಥರೂಪದಲ್ಲಿದ್ದೇನೆ" ಎಂದು

ಅರಿತು ಪ್ರೇಮದಿಂದ ಭಾಗವತ ಧರ್ಮವನ್ನು ಅಕ್ಕರೆಯಿಂದ ಆಚರಿಸಿದರೆ, ನನ್ನ ಸಾಕ್ಷಾತ್ಕಾರ ತಾನಾಗಿಯೇ ವಿಜೃಂಭಿಸುವುದೆಂದು ಆಶ್ವಾಸನೆಯನ್ನು ನೀಡಿ ಅಂತರ್ಧಾನನಾದನು.

ಈ ಮಹದಂಶದಂತೆಯೇ ಸಪ್ತರ್ಷಿ ಮಂಡಲದ ಅಧಿನಾಯಕರೂ ತಪಃ ಸಿದ್ಧ ಮನೋರಥರೂ ಆದ ಆದಿ ಶ್ರೀ ಅಗಸ್ತ್ಯರು, ಭಗವಾನ್ ಶ್ರೀ ರೇಣುಕಾ ಚಾರ್ಯ ಮಹೋದಯರನ್ನು ಆಶ್ರಯವಾಗಿ ಹೃತ್ಪೂರ್ವಕ ಸ್ತುತಿಸುತ್ತ ॥ ಸಂಸಾರ ಸರ್ಪದಷ್ಟಾನಾಂ । ಮೂರ್ಛಿತಾನಾಂ ಶರೀರಿಣಾಂ । ಕಟಾಕ್ಷಸ್ತ ವಕಲ್ಯಾಣಂ । ಸಮು ಜ್ಜೀವನ ಭೇಷಜಂ ॥ ಭವರೋಗವೈದ್ಯನೇ ! ಭುವನಾ ಚಾರ್ಯ ವರೇಣ್ಯನೇ !! ಮುಕ್ಕಣ್ಣೇಶ್ವರನೇ !!! ನಿನ್ನ ಕೃಪಾ ಕಟಾಕ್ಷ ದಿಂದ ನನ್ನನ್ನೂ ಈ ಅಖಂಡ ವಿಶ್ವವನ್ನೂ ಉದ್ಧರಿಸುವ ನಿಮಿತ್ತ, ನಿನ್ನ ಮುಖ ಕಮಲದಿಂದ ಹೊರ ಹೊಮ್ಮಿದ ಉಪದೇಶಾಮೃತವು ನಿನ್ನ ನಿಜ ಸ್ವರೂಪವನ್ನು ಹೊರಸೂಸಿ, ತನ್ಮೂಲಕ ನಿನ್ನ ಸಾಕ್ಷಾತ್ಕಾರಾನುಭವವನ್ನು ನಮಗೆ ಮಾಡುವದರಿಂದ ನೀನು ಶ್ರೀ ಸಿದ್ಧಾಂತ ಶಿಖಾಮಣಿ ಮಹಾ ಗ್ರಂಥ ರೂದಲ್ಲಿ ಅನವರತ ಸುಪ್ರಸನ್ನತೆಯಿಂದ ವಿಜೃಂಭಿಸಿ ॥ ನಿತ್ಯೋ ದಿತಃ ॥ ಎಂದು ಸ್ತುತ್ಯನಿರುವಿ ಎಂಬುದಾಗಿ ಅಗಸ್ತ್ಯ ಮಹರ್ಷಿಗಳು ಪುಳುಕಾಂಕಿತ ಭಕ್ತಿ ಭಾವದಿಂದ ಕೊಂಡಾಡಿರುವುದು ವಿದಿತವಿರುವುದು. ಸದ್ಗುರು ನಾನಕ್‌ರವರ ಉಪದೇಶಾಮೃತಗಳುಳ್ಳ ಗ್ರಂಥಸಾಹೇಬವನ್ನು ಸಿಕ್ ಜನರೂ, ತುಕಾರಾಂ ಮೊದಲಾದ ಸಂತರ ಅಭಂಗಗಳನ್ನು ಮಹಾರಾಷ್ಟ್ರದ ಸಂತರೂ, ತೇವಾರಂ ತಿರುವಾಚಗಂ, ತಿರುಕುರಳ್ ಮೊದಲಾದ ತಮಿಳು ವೇದಗಳೆಂದು ತಮಿಳು ನಾಡಿನ ಶೈವರೂ, ನಾರಾಯಣನ ದಿವ್ಯ ಪ್ರಬಂಧ, ತಿರುಪ್ಪಾವೈ ಗ್ರಂಥಗಳನ್ನು ವೈಷ್ಣವ ಸಂಪ್ರದಾಯದವರೂ ಭಕ್ತ್ಯುತ್ಸಾಹಗಳಿಂದ ಪಲ್ಲಕ್ಕಿಯಲ್ಲಿಟ್ಟು ಪೂಜಿಸಿ, ಜನತೆಗೆ ಅಭಿಮಾನವುಂಟುಮಾಡಲು ರಾಜಬೀದಿಗಳಲ್ಲಿ ಮೆರವಣಿಗೆ ಯಿಂದ ಕೊಂಡೊಯಿದು ತಮ್ಮ ಶ್ರದ್ಧಾಭಕ್ತಿಗಳನ್ನು ವೃದ್ಧಿಗೊಳಿಸುತ್ತಿರು ವುದನ್ನು ನಾವು ಕಾಣುತ್ತಲಿದ್ದೇವೆ. ಅದರಂತೆಯೇ ಪರಮ ಪಾವನವಾದ ಶ್ರೀ ಶಿವಸಿದ್ಧಾಂತ ಶಿಖಾಮಣಿ ಅಥವಾ ಶ್ರೀ ರೇಣುಕ ಗೀತಾ ಮಹಾ ಗ್ರಂಥ ವನ್ನು ಸರ್ವಾದರಣೀಯ ಭಕ್ತಿ ಭಾವದಿಂದ ಜಯಂತಿ ಕಾಲಗಳಲ್ಲಿ, ವಿಶೇಷವಾದ ಹಬ್ಬದ ಉತ್ಸವಕಾಲಗಳಲ್ಲಿ ಈ ಗ್ರಂಥೋತ್ಸವವನ್ನು ಅವಶ್ಯ ವಿಜೃಂಭಣೆಯಿಂದ ಸರ್ವತ್ರ ಆಚರಿಸಿ ಧನ್ಯರಾಗಬೇಕು.

ಶ್ರೀ ಸಿದ್ಧಾಂತ ಶಿಖಾಮಣಿ ಗ್ರಂಥಕರ್ತೃಗಳಾದ ಶ್ರೀ ಶಿವಯೋಗಿ ಶಿವಾಚಾರ್ಯರ ಜಯಂತ್ಯುತ್ಸವವನ್ನು ಎಲ್ಲಾ ಲಿಂಗಾಂಗಿಗಳೂ ಸರ್ವತ್ರ ಪ್ರತಿ ವರ್ಷ ವಿಜೃಂಭಣೆಯಿಂದ ಆಚರಿಸುವುದು ನಮ್ಮ ಕರ್ತವ್ಯವೆನಿಸಿರುತ್ತೆ.

## ॥ ಯಜುಷಾ ಗೀಯತೇ ॥ Yajushaa Geeyate ॥

ಶೃತಿದೇವಿಯ ಹೃದಯವೆನಿಸಿದ "ಷಟ್‌ಸ್ಥಲ ಸಿದ್ಧಾಂತ" ವೇದಾಗಮೋಪನಿಷದಾದಿಗಳ ಸಮನ್ವಯಾರ್ಥವನ್ನು ಸಂಗ್ರಹವಾಗಿ ಪ್ರತಿಪಾದಿಸುವುದರಲ್ಲಿ ಅದ್ವಿತೀಯವಾದ ತತ್ವವೆನಿಸಿರುವುದು. ಸಾಂಖ್ಯ, ಯೋಗ, ಪಾಂಚರಾತ್ರಶಾಸ್ತ್ರ, ಪಾಶುಪತ, ಪೂರ್ವಮೀಮಾಂಸ ಇತ್ಯಾದಿ ಶಾಸ್ತ್ರಗಳು ವೇದೋಕ್ತವಾದವುಗಳೆನಿಸಿ ಪ್ರಮಾಣ ಭೂತವಾಗಿರುವುದು ಸರಿಯಷ್ಟೆ. ಉತ್ತಮವಾದೀ ಶಾಸ್ತ್ರಗಳು--॥ ವೇದೈಕ ದೇಶವರ್ತಿಭ್ಯಃ। ಸಾಂಖ್ಯಾದಿಭ್ಯೋ ಮಹಾಮುನೇ ॥ ಸರ್ವ ವೇದಾನುಸಾರಿತ್ವಾ । ಚ್ಛೈವ ತಂತ್ರಂ ವಿಶಿಷ್ಯತೇ ॥ (ಸಿ.ಶಿ.) ಇವು ವೇದದ ವೊಂದೊಂದು ಭಾಗವನ್ನು ಪುರಸ್ಕರಿಸಿ, ಆದರ ಭಾವದಿಂದ ಅಪ್ಪೈಸಿ ಅನುಸರಿಸುತ್ತಲಿರುವುವು. ಇದರಿಂದ ಮೇಲ್ಕಂಡ ಮತಗಳು ಆದಿಯಿಂದಲೂ ಭಿನ್ನ ಭಿನ್ನ ಅಭಿಪ್ರಾಯವುಳ್ಳವುಗಳಾಗಿಯೇ ಬೆಳೆದುಳಿದು ಬಂದಿರುವುವು. ದ್ವಾಪರಾಂತ್ಯದಲ್ಲಿದ್ದ ವ್ಯಾಸರೂ ಸಹ ಅಂದಿನ ಮಹರ್ಷಿಗಳೂ ವೇದಾರ್ಥಗಳನ್ನು ಪ್ರತಿಪಾದಿಸುವುದರಲ್ಲಿ ಭಿನ್ನಾಭಿಪ್ರಾಯವುಳ್ಳವರಾಗಿಯೇ ಇದ್ದರೆಂದು ಸ್ಪಷ್ಟಪಡಿಸಿರುವಾಗ, ಇತ್ತೀಚಿನ ಭಾಷ್ಯಾಚಾರ್ಯರುಗಳಲ್ಲಿ ಭಿನ್ನ ಭಿನ್ನ ಅಭಿಪ್ರಾಯಗಳು ತಲೆದೋರಿರುವುದರಲ್ಲಿ ಆಶ್ಚರ್ಯವಿಲ್ಲವೆನಿಸುತ್ತೆ. ಮೇಲ್ಕಂಡ ಮತಗಳಂತಲ್ಲದೆ, ಶಿವಾದ್ವೈತ ಸಿದ್ಧಾಂತವು, ಶಿವಪ್ರಣೀತವಾದ ಅಖಿಲಾಗಮಾಮ್ನಾಯಾದಿಗಳ ಸಾರ ಪ್ರತಿಪಾದಕವಾಗಿದ್ದು ॥ ಸರ್ವ ಶೃತಿ ಸಮನ್ವಯಃ ॥ ಎಂಬ ರೇಣುಕ ಗೀತೆಯಲ್ಲಿ ಉಕ್ತವಾದಂತೆ ಸದಾ ಸರ್ವಾದರಣೀಯವೆನಿಸಿರುವುದು.

॥ ವೇದ ಸಿದ್ಧಾಂತ ಯೋ ರೈಕ್ಯಂ ।
ಏಕಾರ್ಥ ಪ್ರತಿ ಪಾದನಾತ್ ॥

ಎಂಬ ಭುವನಾಚಾರ್ಯವರೇಣ್ಯರಾದ ಭಗವತ್ಪಾದ ಜಗದ್ಗುರು ಶ್ರೀ ರೇಣುಕಾದಿ ಪಂಚಾಚಾರ್ಯರುಕ್ತಿಯಂತೆ ವೇದ ಸಿದ್ಧಾಂತಗಳೆರಡೂ ಏಕಾರ್ಥಾಭಿಪ್ರಾಯವುಳ್ಳವುಗಳೆನಿಸಿರುವುವು. ಶ್ರೀ ವೇದವ್ಯಾಸ, ಶ್ರೀ ದೂರ್ವಾಸಾದಿ

ಮಹರ್ಷಿ ಕುಲ ತಿಲಕರೂ ಇದೇ ಅಭಿಪ್ರಾಯವುಳ್ಳವರಾಗಿ ಪೂರ್ಣ ಮನ್ನಿಸಿರುವರು. ಶ್ರೀಕಂಠ ಮತ ಪೋಷಕರೂ, ಪ್ರತಿಭಾವಂತರೂ ಆದ ಶ್ರೀ ಅಪ್ಪಯ್ಯ ದೀಕ್ಷಿತರೂ ಸಹ ಉತ್ತಮೋತ್ತಮವೆನಿಸಿದ ಹಾಗೂ ಸರ್ವ ಶೃತಿ ಸಮನ್ವಯವೆನಿಸಿದ ಮೇಲ್ಕಂಡ ಮಹಾಚಾರ್ಯರ ಘನ ಸಿದ್ಧಾಂತದ ನಿಲುವನ್ನೇ ಸಮರ್ಥಿಸುವಂತೆ

॥ ವಯಂ ವೇದ ಶಿವಾಗಮಯೋ ।
ರ್ಭೇದಂ ನ ಪ ಶ್ಯಾಮಃ ॥

ಎಂಬುದಾಗಿ ತಮ್ಮ ಸ್ಪಷ್ಟಾಭಿಪ್ರಾಯವನ್ನು ಘಂಟಾ ಘೋಷವಾಗಿ ಘೋಷಿಸಿರುವರು. ಅಂದರೆ ವೇದ ಶಿವಾಗಮಗಳಿಗೆ ಯಾವ ಭೇದವೂ ನಮಗೆ ಕಂಡುಬಂದಿಲ್ಲವೆಂದು ಸಾರಿರುವರು. ಇಲ್ಲಿ ವೇದಗಳೆಂದರೆ, ವೇದಾಂತಾರ್ಗತವಾದ ಸಾರ ಸರ್ವಸ್ವವೆಂದೇ ಅರ್ಥ.

ಈ ಮಹದಂಶವನ್ನು ಮಹಾಚಾರ್ಯರು ಮುಕ್ತ ಕಂಠದಿಂದ ಸಾರುತ್ತ ಇಷ್ಟ ಲಿಂಗಧಾರಣಾ, ಕರಾಬ್ಜ ಪೀಠದಲ್ಲಿಟ್ಟು ಇಷ್ಟಲಿಂಗ ಪೂಜೆಯನ್ನು ಸಂಧ್ಯಾ ಕಾಲಗಳಲ್ಲಿ ಶುಚಿರ್ಭೂತರಾಗಿ ನಿತ್ಯವೂ, ದೇಹಾಂತ್ಯದವರವಿಗೆ ಬಿಡದೆ ಮಾಡುವುದು, ಇವೇ ಮೊದಲಾದ ಧ್ಯಾನ, ಧಾರಣ, ಸಮಾದಿ ಯೋಗಗಳು ಋಗ್ವೇದದಲ್ಲಿ—

ಋಗ್ವೇದ:-

॥ ಋಗಿತ್ಯಾಹ ಪವಿತ್ರಂ ತೇ । ವಿತತಂ ಬ್ರಹ್ಮಣಸ್ಪತೇ ।
ತಸ್ಮಾತ್ಪವಿತ್ರಂ ತಲ್ಲಿಂಗಂ ಧಾರ್ಯಂ ಶೈವಮನಾಮಯಃಂ ॥

ಈ ಮಂತ್ರಾರ್ಥ ಇಷ್ಟಲಿಂಗ ಧಾರಣ, ಉಪಾಸನ, ಧ್ಯಾನಾದಿಗಳಿಂದ ಶರೀರೇಂದ್ರಿಯಾದಿ ಕರಣಂಗಳೂ, ಬುದ್ಧಿ ಮನಂಗಳೂ ಪವಿತ್ರವಾಗಿ, "ಪವಿತ್ರ" ನೆನಿಸಿದ ಪರಾತ್ಪರ ವಸ್ತುವಾದ ಚಿಲ್ಲಿಂಗ, ಮಹಾಲಿಂಗ ಅಥವಾ ಆತ್ಮಲಿಂಗದ ಸ್ವರೂಪಾನುಭವಕ್ಕೆ ನಾಂದಿಯೆನಿಸಿರುವುದೆಂದು ಋಗ್ವೇದದ ಮಂತ್ರಾರ್ಥವೆನಿಸಿರುವುದೆಂದು ಸ್ಪಷ್ಟಪಡಿಸಿರುವರು. ॥ ಋತಗ್ಂ ಸತ್ಯಂ ॥.

ಯಜುರ್ವೇದ:-

॥ ಯಾ ತೇ ರುದ್ರ ॥ ಎಂಬ ಯಜುರ್ವೇದ ಮಂತ್ರವು
॥ ದೇಹೋ ದೇವಾಲಯ ಪ್ರೋಕ್ತಃ ॥ ಎಂಬಂತೆ ಮತ್ತು
॥ ಇದಂ ಶರೀರಂ ಕೌಂತೇಯ । ಕ್ಷೇತ್ರಮಿತ್ಯಭಿಧೀಯತೇ ॥

ಎಂಬ ಗೀತೋಕ್ತಿಯ ಆಧಾರಗಳನ್ನೊಳಗೊಂಡಂತೆ, ಹೃನ್ಮಂದಿರದಲ್ಲಿ ಅಥವಾ ದಹರಾಕಾಶದಲ್ಲಿ ಅಂಗುಷ್ಟ ಮಾತ್ರನಾಗಿ ಅಂತರ್ಯಾಮಿಯಾಗುಳ್ಳ ಪ್ರಾಣಲಿಂಗದ ಪಡಿಯಚ್ಚಿನ ಚಿನ್ಮುದ್ರೆಯಾಗಿ ಗುರು ಕಟಾಕ್ಷ ದೀಕ್ಷಾ ವಿಶೇಷೇಣ ಇಷ್ಟಲಿಂಗವಾಗಿ ಕರಕಂಜವಲ್ಲಿ ಪರಿಶೋಭಿಸುವ ಮಹಾ ಪ್ರಾಣದ ಕಳೆಯನ್ನು ಅಂಗದಲ್ಲಿ ಯಾವಜ್ಜೀವವೂ ಧರಿಸಿ, ಸ್ಮರಣ ಪೂರ್ವಕ ನಿತ್ಯಾನು ಸಂಧಾನವನ್ನು ಅನನ್ಯ ಭಕ್ತಿ ಭಾವದಿಂದ, ತೈಲ ಧಾರೆಯಂತೆ ಈಶ್ವರಾರಾಧನೆಯನ್ನೆಸಗಿ ಶರಣಾಗತನಾಗಬೇಕೆಂಬ ಭಿಮತವನ್ನು ಯಜು ರ್ವೇದ ಮಂತ್ರವು ಗಂಭೀರವಾಗಿ ಬೋಧಿಸುತ್ತಲಿರುವುದು.

ಮೇಲ್ಕಂಡ ಯಜುರ್ವೇದಾಂತರ್ಗತ ಮಹಾ ಮಂತ್ರದ ಪೂರ್ಣ ಪಾಠ ಕೆಳಕಂಡಂತಿರುವುದು—

॥ ಯಾ ತೇ ರುದ್ರ ಶಿವಾ । ತನೂರಘೋರಾ ಪಾಪಕಾಶಿನೀ ॥
ತಯಾ ನಸ್ತನು ವಾ ಶಂತಮಯಾ । ಗಿರಿಶಂತಾಭಿಚಾಕಶೀಹಿ ॥

ಅಂದರೆ "ಭೋರುದ್ರ ! ತೇ ಅಪಾಪಕಾಶಿನೀ, ಅಘೋರ, ಯಾತನೂಃ, ಶಿವಾ, ಶಂತಮಯಾ. ತಯಾ ತನುವಾ, ಭೋ ! ಗಿರಿ ಶಂತ (ಗಿರೀಶನೇ) ತ್ವಂ, ನಃ, (ನಮ್ಮತ್ತ) ; ಅಭಿಚಾಕಶೀಹಿ (ಅಭಿಮುಖವಾಗಿ ಪ್ರಕಾಶಿಸುವವ ನಾಗು ಎಂದು ಪ್ರಾರ್ಥಿಸಲಾಗಿದೆ). ಯಜುರ್ವೇದವು ಮುಕ್ತಕಂಠದಿಂದ ಪ್ರತಿಪಾದಿಸುವ ಮಹದಂಶವೇನೆಂದರೆ, ಹೃದಾಕಾಶವಲ್ಲಿ ಉದಯಾಸ್ತಮಾನ ಗಳಿಲ್ಲದೆ ಪ್ರಜ್ವಲಿಸುವ ಪ್ರಾಣಲಿಂಗವು, ಸದ್ಗುರುವಿನ ಹಸ್ತ ಮಸ್ತಕಸಂ ಯೋಗ ದೀಕ್ಷೆಯಿಂದ (ವೇದಾ ದೀಕ್ಷೆಯಿಂದ) ॥ ಕರಾಬ್ಜ ಪೀಠೇ ವಿನ್ಯಸ್ಯ । ತಧ್ಯಾನಾಸಕ್ತ ಮಾನಸಃ ॥ ಅಂಗನ ಉದ್ಧಾರಾರ್ಥ ಇಷ್ಟಲಿಂಗ ರೂಪವಾಗಿ ಅವನ ಕರ ಕಂಜದಲ್ಲಿ ಪೂಜ್ಯ ವಸ್ತುವಾಗಿ ರಾರಾಜಿಸಿ, ॥ ತಯ ತನುವಾ॥ ಶರೀರದಲ್ಲಿ ಧರಿಸಲ್ಪಟ್ಟು, ನಿತ್ಯ ಧ್ಯಾನ, ಧಾರಣ, ಸಮಾದಿಯೋಗಗಳಿಂದ ತನುಕರಣಂಗಳು ಶಿವಕರಣಂಗಳಾಗಲು, ಗುರುಕರುಣೆಯಿಂದ ಜೀವನು ತಾನು ಶಿವನೆಂದೇ ಸ್ವಾನುಭೂತಿಯಲ್ಲಿ ಅರಿತು ಲಿಂಗಾಂಗ ಸಾಮರಸ್ಯ (ಮೋಕ್ಷ) ವನ್ನು ಹೊಂದುವನು.

ಭಗವತ್ಪಾದ ಶ್ರೀಮಜ್ಜಗದ್ಗುರು ರೇಣುಕಾಚಾರ್ಯ ಮಹೋದಯರು ಈ ಅಂಶವನ್ನೇ ಅಖಂಡವಾಗಿ ಪ್ರತಿಪಾದಿಸುತ್ತಾ ಶ್ರೀ ಶಿವ ಸಿದ್ಧಾಂತ ಶಿಖಾ ಮಣಿಯಲ್ಲಿ—

॥ ಅಘೋರಾ ಪಾಪಕಾ ಶೀತಿ । ಯಾ ತೇ ರುದ್ರ ಶಿವಾತನೂಃ ।
ಯಜುಷಾ ಗೀಯತೇ ಯಸ್ಮಾ । ತ್ತಸ್ಮಾಚ್ಛೈವೋಘವರ್ಜಿತಃ ॥
(ಸಿ.ಶಿ.) 6—61.

॥ ಪಾಪಕಾಶೀತಿ ॥ ಅಂದರೆ, ಶರೀರತ್ರಯಂಗಳಲ್ಲಿ ಭಾವಲಿಂಗವೇ ಮೊದಲಾದ ಲಿಂಗತ್ರಯಗಳನ್ನು ಧರಿಸಿ, ಪೂಜಿಸಿ, ನಿತ್ಯಾನುಸಂಧಾನವನ್ನು ಅವ್ಯಭಿಚಾರಿಣಿ ಭಕ್ತಿಯಿಂದ ಮಾಡುವುದರಿಂದ, ಅಂಗನ ಬಹುಪೂರ್ವ ಕೃತ ದುರಿತಗಳ ವಾಸನಾಬಲದಿಂದ, ಸಕಲೇಂದ್ರಿಯಗಳಲ್ಲಿ ಅಡಿಗಡಿಗೆ ಸ್ವಾಭಾವಿಕವಾಗಿ ಜನಿಸಬಹುದಾದ ಪಾಪಗಳನ್ನು, ಆಗಿಂದಾಗ್ಗೆ ನಿರ್ಮೂಲ ಗೊಳಿಸಿ, ಶರಣನ (ಅಂಗನ) ಶರೀರವನ್ನು ಲಿಂಗ ಶರೀರವಾಗಿ ಪರಿಶೋಭಿಸು ವಂತೆ ಮಾಡಿ, ಅಂಗನನ್ನು (ಜೀವಾತ್ಮನನ್ನು) ಶಿವನನ್ನಾಗಿ ರೂಪಿಸುವ ಶಿವ ಯೋಗವನ್ನು, ಮಹಾಚಾರ್ಯರು ಪ್ರತಿಪಾದಿಸುತ್ತಾ, ಈ ಮಹೋನ್ನತ ವಾದ ವಿಶ್ವಧರ್ಮವನ್ನು ॥ ಯಜುಕ್ಷಾ ಗೀಯತೇ ॥ ಎಂದು ಘಂಟಾಘೋಷವಾಗಿ ವಿಶ್ವಕ್ಕೆ ಜಗದಾದಿಯಲ್ಲೇ ಅರುಹುವ ನಿಮಿತ್ತ ಸಿಂಹ ಘರ್ಜನೆಯನ್ನು ಮಾಡಿರುವರು.

॥ ಯಾ ತನೂಃ ॥ ಯಜುರ್ವೇದಾಂತರ್ಗತವಾದೀ ಮಹಾ ಮಂತ್ರದ ವಾಕ್ಯವು ವಿಶಾಲಾರ್ಥ ಗರ್ಭಿತವಾಗಿರುವುದು. ಲಿಂಗಧಾರಿ ಅಥವಾ ಲಿಂಗ ಶರೀರಿಯಾದ ಶಿವಶಿರವಣನ ದೇಹದ ವೊಳಗೂ ಹೊರಗಡೆಯಲ್ಲೂ ಓತ ಪ್ರೋತವಾಗಿ ಪ್ರಕಾಶಿತವಾಗಿರುವ, ಇಷ್ಟ ಪ್ರಾಣ ಲಿಂಗಗಳ ನೆಲೆ ಕಲೆಗಳನ್ನು ಗುರ್ತಿಸಲು ಸಹಾಯಕವೆನಿಸುವಂತೆ ಕಠೋಪನಿಷತ್ತಿನಲ್ಲಿ ॥ ಅಂಗುಷ್ಠ ಮಾತ್ರಂ ಪುರುಷೋಂತರಾತ್ಮಾ ॥ ಎಂದು ಪ್ರತಿಪಾದಿತವಾಗಿದೆ. ಈ ಅಂಶ ವನ್ನೇ ಮತ್ತೊಂದು ಶೃತಿಯಲ್ಲಿ ॥ ಹೃತ್ಪದ್ಮ ಮಧ್ಯೇ । ಪುರುಷಃ ಪ್ರಮಾಣಂ॥ ಎಂದೂ ಆತ್ಮನ ಇರುವಕೆಯ ಬಗ್ಗೆ ನಿರೂಪಿತವಾಗಿದೆ. ಪವಿತ್ರವಾದ ಹೃದಯ ಪೀಠವು ಪ್ರಾಣಲಿಂಗದ ಇರುವಿಕೆಗೆ ಮೂಲ ಸ್ಥಾನವೆನಿಸಿರುತ್ತೆ. ಇದರಿಂದಾಗಿ ಹೃದಯದ ಹಿರಿಮೆ ಸಹಸ್ರಾಂಶ ಅಧಿಕವೆನಿಸಿ ॥ ಹೃದಯಂ ತ ದ್ವಿಜಾನೀಯಾತ್ ॥ ವಿಶ್ವಸ್ಯ ಆಯತನಮುಚ್ಯತೇ ॥ ಎಂದು ಪ್ರಶಂಶಿಸ ಲಾಗಿರುತ್ತೆ. ವಿಶ್ವೋತ್ತರೋತ್ತರ ವಿಚಿತ್ರಾಯಮಾನವಾದ ದೃಶ್ಯಾ ದೃಶ್ಯ ಬ್ರಹ್ಮಾಂಡಗಳ ಉತ್ಪತ್ತಿ, ಸ್ಥಿತಿಗಳಿಗೆ, ಇವುಗಳ ತೋರ್ಪಿಕೆಗೆ ಹೃದಯವು ಆಳ ವಾದ ಆಗರವೆನಿಸಿದೆ ಎಂಬ ಅರ್ಥ ಹೊರಸೂಸುವುದು. ಹೃದಯದಲ್ಲಿದ್ದು ॥ ಸರ್ವ ಹೃದಯ ಪ್ರಕಾಶಃ ॥ ಅಖಿಲವನ್ನೂ ಪ್ರಕಾಶಿಸುತ್ತ ಆತ್ಮನು ತನುವನ್ನು

ಚೈತನ್ಯಮಯವಾಗಿರಿಸಿರುವನು. ಕನ್ನಡ ವಚನಕಾರರ ಪಿತಾಮಹರೆನಿಸಿದ ಶ್ರೀ ದೇವರ ದಾಸಿಮಯ್ಯನವರು ತಮ್ಮೊಂದು ವಚನದಲ್ಲಿ ||........ ಆತ್ಮನನ್ನು ದೇಹದೊಳಗೆ ಅರಿಯದಂತಿರಿಸಿದೆ | ನೀ ಬೆರೆಸುವ ಭೇದಕ್ಕೆ | ಬೆರಗಾದೆನ್ನೆ ರಾಮನಾಥಾ || ಎಂದು ಆರುಹಿರುವುದು ಗಮನಾರ್ಹವೆನಿಸಿದೆ. ಈ ವಿವರಣೆ ಗಳಿಂದ ಲಿಂಗರೂಪಿಪರ ಶಿವನು ತನುವಿನವೊಳಗೆ ಪ್ರಾಣಲಿಂಗ, ಭಾವಲಿಂಗ ರೂಪದಲ್ಲಿ ಜ್ಯೋತಿರ್ಮಯನೆನಿಸಿ ಪ್ರಜ್ವಲಿಸುತ್ತಿರಲು, ದೇಹದ ಮೇಲೆ ಇಷ್ಟ ಲಿಂಗವಾಗಿ ಬೆಳಗುತ್ತ ಜೀವಾತ್ಮನನ್ನು ಸ್ಥಿತ ಪ್ರಜ್ಞನನ್ನಾಗಿ ಮಾಡುವುದರಲ್ಲಿ ಲಿಂಗಧಾರಣವು ಪ್ರಭಾವಾನ್ವಿತವಾಗಿರುವುದು. || ಲಿಂಗಂತು ಶಿವಯೋರ್ದೇಹಃ ಎಂಬ ವಾಯವೀಸಂಹಿತೆ ಮೇಲ್ಕಂಡ ಯುಜುರ್ವೇದ ಮಂತ್ರದ ತಿರುಳೆನಿಸಿಡು ವುದು.

|| ಯಾ ತನೂಃ || ಈ ಮಹಾ ವಾಕ್ಯ ಶಿವಶರಣನ ಲಿಂಗಶರೀರದ, ಘನತೆ, ಪವಿತ್ರತೆಗಳನ್ನು ಗೌರೀ ಶಂಕರದ ಶಿಖರದ ಎತ್ತರಕ್ಕೆ ಎತ್ತಿ ತೋರಿ ಸುತ್ತಲಿರುವುದು. ಕೆಳಗಿನ ಮಂತ್ರ ಅದಕ್ಕೆ ನಿದರ್ಶನವೆನಿಸಿರುವುದು.

|| ಓಂಕಾರೋ ವದನಂ ದೇವಿ |
ನಮಃ ಕಾರೌ ಭುಜದ್ವಯಂ ||
|| ಶಿಕಾರೋ ದೇಹ ಮಧ್ಯಸ್ತು |
ವಾಯಕಾರಾ ಪದದ್ವಯಂ ||
|| ಪೀಠಂ ಪಾದಾದಿ ಜಾನಂತ |
ಮಾ ನಾಭೇ ರ್ಮಧ್ಯ ಮೀರಿತಂ ||
|| ಹೃದಯಾಂತಂ ವರ್ತುಳಂ |
ಸ್ಯಾತ್ಕಂ ಠಾಂತಂ | ಗೋಮುಖಂ ತಥಾ ||
|| ಭ್ರೂ ಮಧ್ಯಾಂತಂ | ಲಿಂಗ ಕಂಠೋ |
ಮಸ್ತ ಕೋ ಲಿಂಗಮಸ್ತಕಃ ||

ಲಿಂಗ ಭೋಗೋಪ ಭೋಗಿಯಾದ ಶಿವಶರಣನ ದೇಹ ಲಿಂಗದೇಹ. ಪವಿತ್ರ ಕ್ಷೇತ್ರವೆನಿಸಿದ ಎಡೆಯೂರು ಶ್ರೀ ತೋಂಟದ ಸಿದ್ಧಲಿಂಗೇಶ್ವರ ಯತಿ ವರ್ಯರ ದಿವ್ಯ ಮಂಗಳ ದೇಹ ಲಿಂಗದೇಹ. ಅವರು ಪೂಜಾಯೋಗದಲ್ಲಿ ಕುಳಿತಿರುವ ಸ್ಥಳವೇ ಭೂ ಕೈಲಾಸ. ಅವರ ವದನಾರವಿಂದವೇ "ಓಂಕಾರ" ಭುಜಗಳೆರಡೂ "ನ ಮಃ" ಯೆಂಬೆರಡು ಮಹಾ ಮಂತ್ರದ ಅಂಗಗಳು;

ಕಂಠದಿಂದ ಕೆಳಗೆ ತೊಡೆಗಳವರೆಗೆ "ಶಿ" ಕಾರ ಇದು ದೇಹದ ಮಧ್ಯಭಾಗ, (ಪ್ರಾಣಲಿಂಗದ ವ್ಯಾಪ್ತಿಗೊಳಪಟ್ಟಭಾಗ); ಅಲ್ಲಿಂದ ಕೆಳಗೆ ಎರಡು ಪಾದ ಗಳು, ॥ ವಾಯು ॥ ಎಂಬೆರಡಕ್ಷರ ಸ್ವರೂಪ ಇದರಿಂದಮೂಲ ಪಂಚಾಕ್ಷರ ಸ್ವರೂಪಮಯರಾಗಿ ಶಿವಯೋಗದಲ್ಲಿ ನಿರತರಾಗಿರುವರು. ಮತ್ತೂ ಪಾದಾದಿ ಜಾನು ಪರ್ಯಂತ ಲಿಂಗದ ಪೀಠವೆನಿಸಿರುತ್ತೆ. ಅಲ್ಲಿಂದ ಮೇಲೆ ನಾಭಿಸ್ಥಾನ ದವರೆಗೆ ಲಿಂಗದ ಗೋಳಕವೆನಿಸಿ, ಅಲ್ಲಿಂದ ಹೃದಯದವರೆವಿಗೆ ॥ ಲಿಂಗದ ವರ್ತುಳ ॥ ಭಾಗಕ್ಕೆ ಸಮವೆನಿಸಿರಲು; ಇನ್ನೂ ಮೇಲೆ ಕಂಠದವರೆಗೆ ॥ ಲಿಂಗದ ಗೋಮುಖ ವೆನಿಸಿ ರಾರಾಜಿಸಲು; ಅಲ್ಲಿಂದ ಭ್ರೂಮಧ್ಯದವರೆಗೆ ॥ ಲಿಂಗದ ಕಂಠ ವೆನಿಸಿರಲು, ಅವರ ಮಸ್ತಕವೇ ॥ ಲಿಂಗಮಸ್ತಕವಾಗಿ ॥ ವಿರಾಜಿತವಾಗಿ ರುವುದು. ಮೇಲ್ಕಂಡ ಶರಣನ ಲಿಂಗ ಶರೀರದ ಮಹತ್ವವನ್ನು ಶಿವನು ಜಗನ್ಮಾತೆಯಾದ ಶ್ರೀ ಗಿರಿಜೆಗೆ ಅರುಹಿರುವನು. ಇತ್ಯಾದಿ ಕಾರಣಗಳಿಂದ ಯಜುರ್ವೇದ ಪ್ರೋಕ್ತ ॥ ಯಾ ತೇ ರುದ್ರ ಶಿವಾತನೂಃ ॥ ಎಂಬ ಮಹಾ ಮಂತ್ರದ ಅರ್ಥ ವ್ಯಾಪ್ತಿ ಮತ್ತು ತತ್ವದ ಗಾಂಭೀರ್ಯ ಅನುಪಮವೆನಿಸಿರುತ್ತೆ.

ಧರ್ಮದ ಹೃದಯವನ್ನು ಸ್ವಾನುಭೂತಿಯಲ್ಲಿ ಕಂಡನುಭವಿಸಿ, ವಿಸ್ತಾರ ವಾಗಿ ಉದಹರಿಸುವ ಸಂದರ್ಭದಲ್ಲಿ, ಮಾನವನು ಸಹಜವಾಗಿಯೇ ಧರ್ಮ ಪ್ರತಿಪಾದನೆಯಲ್ಲಿ ಸಹಿಷ್ಣುತಾ ಭಾವವನ್ನು ಬೆಳಸುಳಿಸಿ ಪ್ರವರ್ಧಿಸುವ ನಿರ್ಮಲ ಮನೋಭಾವವನ್ನು ಹೊಂದಿರಬೇಕು. ಮೇಲ್ಕಂಡ ಮಹದಂಶಗಳು ಆಗಮಾಮ್ನಾಯಾದಿಗಳಲ್ಲಿ ಪ್ರೋಕ್ತವಾಗಿರುವುದು ಭಾನುಕೋಟಿ ಪ್ರಕಾಶ ಮಾನವಾಗಿ ಕಂಡುಬಂಡ ಸತ್ಯಾಂಶವಾಗಿರುವುದುನ್ನು ಪ್ರಾಜ್ಞರಾದ ಸ್ಮಾರ್ಥಾದಿ ಶ್ರಿಮತಸ್ಥರು ಈ ಮಹದಂಶಗಳನ್ನು ಒಮ್ಮನಸ್ಸಿನಿಂದ ಮನಸ್ಕರಿಸುವರೆಂದು ಆಶಿಸಲಾಗಿದೆ. ಧರ್ಮ ಸಮೂಢ ಚೇತಭಾವವಾಗಲಿ ಅಥವಾ ಕಾರ್ಪಣ್ಯ ದೋಷೋಪಹತ ಸ್ವಭಾವವಾಗಲಿ, ಇಣಿಕಿ ನೋಡಲು ಅವಕಾಶ ವೀಯ ಬಾರದು.

ಧರ್ಮಜ್ಞರು, ಕೃತಜ್ಞರು, ಭಾವಜ್ಞರೂ ॥ ಸತ್ಯಮೇವೋದ್ಧರಾಮ್ಯಹಂ ॥ ಎಂಬ ವ್ರತ ಶೀಲರಾಗಿ, ಮಹಾ ವ್ರತಿಗಳೆನಿಸಿ, ಶ್ರೀ ಶಿವಸಿದ್ಧಾಂತ ಶಿಖಾ ಮಣಿಗೆ, ಶ್ರೀ ರೇಣುಕ ಗೀತೆಗೆ ಕನ್ನಡ, ಆಂಗ್ಲ ಭಾಷೆಗಳಲ್ಲಿ ಶಬ್ದಾರ್ಥ ಸಹಿತ, ಧಾರ್ಮಿಕ, ಸಾಮಾಜಿಕ ಹಾಗೂ ರಾಜಕೀಯ ರಂಗಗಳಲ್ಲಿ ಅನಂತ ಭಾಷ್ಯ ಗಳನ್ನು ವಿಶ್ವಧರ್ಮದ ತಳಹದಿಯ ಮೇಲೆ ಅನಂತ ಮುಖವಾಗಿ ರಚಿಸಿ, ಸಹಸ್ರ ಗಟ್ಟಲೆ ಗ್ರಂಥಗಳನ್ನು ಅಲ್ಲಲ್ಲೇ ಪ್ರಿಂಟು ಮಾಡಿಸಿ, ಕೋಟಿಗಟ್ಟಲೆ ಆಸ್ತಿಕರ

ಮಧ್ಯೆ ಶ್ರದ್ಧಾಭಕ್ತಿ ಆಸಕ್ತಿಯಿಂದ ಪ್ರಚಾರ ಮಾಡುವಂತಾಗಲಿ ಎಂದು ನಾನು ಜಗದೀಶ್ವರನಲ್ಲಿ ಅನನ್ಯ ಭಕ್ತಿ ಭಾವದಿಂದ ಪ್ರಾರ್ಥಿಸುತ್ತೇನೆ.

ಬೆಂಗಳೂರು-5.                ಟಿ. ಬಿ. ಬಸವರಾಜಯ್ಯ,
17—3—1973                ನಂ. 38, ನೇತಾಜಿರೋಡು

ಜ|| ಶ್ರೀ ರೇಣುಕರ ಜಯಂತ್ಯುತ್ಸವದ ಸವಿ ಸ್ಮರಣಾರ್ಥ ಬಿಡುಗಡೆ ಯಾದುದು, ಬೆಂಗಳೂರು-5.

[ಈ ಗ್ರಂಥ ಕುಸುಮ ತಾ|| 17-3-1973ನೇ ಸ್ಥಿರವಾರ ಜಗದ್ಗುರು ಶ್ರೀ ರೇಣುಕ ಜಯಂತ್ಯುತ್ಸವದ ಸ್ಮರಣಾರ್ಥ ಬಿಡುಗಡೆಯಾದುದು.]

|| ಓಂ ತತ್ಸತ್ ||

The following books have been written and published by Sri T. B. Basavarajayya, No. 38, Netaji Road, Bangalore-5.

ಟಿ. ಬಿ. ಬಸವರಾಜಯ್ಯ ವಿರಚಿತ ಗ್ರಂಥಗಳ ಪಟ್ಟಿ, ಬೆಂಗಳೂರು-5.

1. Sri Renuka's incarnation and His Philosophy (a brochur in English)

Published by the authorities of Sri Mahantara Mutt, Chickpet, Bangalore-1.

ಶ್ರೀ ರೇಣುಕರ ಲಿಂಗಾವತಾರ ಆಂಗ್ಲದಲ್ಲಿ ಕಿರುಹೊತ್ತಗೆ.

2. Sri Shrungeri Sankaracharyarige Dattawaada Chandra Mouleeswara Lingada-Nija Vruttaantha. In Canarese, First Part (325 pages price Rs. 5—00).

ಶ್ರೀ ಶೃಂಗೇರಿ ಜ|| ಆದಿ ಶಂಕರಾಚಾರ್ಯರಿಗೆ ದತ್ತವಾದ, ಚಂದ್ರ ಮೌಳೀಶ್ವರ ಲಿಂಗದ ನಿಜ ವೃತ್ತಾಂತ ಪ್ರಥಮ ಭಾಗ, ಪುಟ 325 ಬೆಲೆ ರೂ. 5—00.

3. Writing Commentaries on "Sri Siva Siddhanta Sikhamani" both in Canarese and English is the Need of the hour. (about 150 pages price Rs. 4—00, both in English and Canarese.) 1000 books released. (A Spiritual call).

ಶ್ರೀ ಶಿವ ಸಿದ್ಧಾಂತ ಶಿಖಾಮಣಿಗೆ ಭಾಷ್ಯಾಮೃತ ರಚನೆಯ ಆವಶ್ಯಕತೆ ಎಂಬ ವಿನಂತಿ ಗ್ರಂಥ ಕನ್ನಡ-ಆಂಗ್ಲ ಭಾಷೆಗಳಲ್ಲಿ ಪುಟ ಸುಮಾರು 150. ಬೆಲೆ ರೂ. 4—00.

4. The Philosophy of "Sri Shat Sthala Siddhantha." (This book is under print.) 1000 books Price Rs. 4—00.

"ಷಟ್ ಸ್ಥಲ ಸಿದ್ಧಾಂತ" ಆಂಗ್ಲದಲ್ಲಿ, ಅಚ್ಚಿನಲ್ಲಿದೆ.

5. "The Essentials of Spiritualism". This book is under print. It propounds Viswa Dharma. About 300 pages, 2000 books are under print. Price Rs. 6—00.

"ಎಸೆನ್ಷಿಯಲ್ಸ್ ಆಫ್ ಸ್ಪಿರಿಚುವಲಿಜಂ" ಆಂಗ್ಲದಲ್ಲಿ ಸುಮಾರು 300 ಪುಟ 2000 ಪ್ರತಿಗಳು ಅಚ್ಚಿನಲ್ಲಿದೆ. ವಿಶ್ವಧರ್ಮ ಪ್ರತಿಪಾದಕ ಗ್ರಂಥ.

6. Presentation of Sri Chandra Mouleeswara Linga to Jagadguru Adi-Sri Shankaracharya of Sri Shrungeri. Second Part in Canarese under print.

ಶ್ರೀ ಶೃಂಗೇರಿ ಜ॥ ಆದಿ ಶ್ರೀ ಶಂಕರಾಚಾರ್ಯರಿಗೆ ದತ್ತವಾದ ಶ್ರೀ ಚಂದ್ರಮೌಳೀಶ್ವರ ಲಿಂಗದ ನಿಜ ವೃತ್ತಾಂತವೆಂಬ ಮೇಲ್ಕಂಡ ಮಹಾ ಗ್ರಂಥದ ದ್ವಿತೀಯ ಭಾಗ ಅಚ್ಚಿನಲ್ಲಿದೆ. ಸತ್ಯಾಂಶ ಪ್ರತಿಪಾದಕವಾಗಿದ್ದು ಹೃದಯಂಗಮವಾಗಿದೆ.

॥ ಓಂ ಶಾಂತಿಃ ಶಾಂತಿಃ ಶಾಂತಿಃ ॥

Bangalore-5
17-3-1973

## An appeal among the generous Public.

## ಅಧ್ಯಾತ್ಮ ವಿದ್ಯಾ ಪ್ರೇಮಿಗಳಾದ ಸಹೃದಯರಲ್ಲಿ ವಿನಂತಿ.

|| Dharmo Rakshati Rakshitaha
Dharmena Labhate Sarvam
Dharma Saara Midam Jagath
Tasmaath Dharma Mevoh
Ddharaamyaham ||
|| Manushyaanaam Hitham Dharmam
Vartamaane Kalou Yuge ||

|| ಧರ್ಮೋ ರಕ್ಷತಿ ರಕ್ಷಿತಃ ||
|| ಧರ್ಮೇಣ ಲಭತೇ ಸರ್ವಂ ||
|| ಧರ್ಮ ಸಾರಮಿದಂ ಜಗತ್ ||
|| ತಸ್ಮಾತ್ || ಧರ್ಮ ಮೇವೋದ್ಧರಾಮ್ಯಹಂ ||
|| ಮನುಷ್ಯಾಣಾಂ ಹಿತಂ ಧರ್ಮಂ | ವರ್ತಮಾನೇ ಕಲೌ ಯುಗೇ ||

The world is rather swiftly treading the path of retrogression in all fronts, detering righteousness and the progressive venues of **Dharmic** assertions and fulfilment thereto. As a result of which, discard, distress, deception, declination, violence, thirst for Power and prestige, arrogance, egoism etc., are rampantly enveloping the humanity all round the Globe under the diabolical guise of Peace and Good-will Mission. In spite of surrounded by hazardous enviornments, God fearing and the Law abiding persons dauntlessly encounter the same with stern guts. At times they are driven to the extreme proximity of either to do or to

die as it were and are placed under delirious predicament. Under the circumstances the only path open to them is to lift up their hearts in solemn prayers with folded hands unto the Most Supreme God Almighty Parasiva Brahma and invoke His All Merciful Grace and Blessings, totally surrendering at His Divine Feet so that they may be lead in the royal path of Righteousness and Spiritualism. The unseen Divine Power will not desert those who with faith and devotin steadfastly cling to the same professedly. Those who strictly adhere to the sterling precepts of Dharma in letter and spirit are in turn protected and saved. Verily, Verily! they do realise happiness and prosperity around them in plently and a clemency in atmosphere is also created for others just to share the same advantages and to rejoice.

In order to create such a soothing climate unto one and all, I have avowed to spread the Knowledge of Athman--Divinity and Spiritualism extensively to the extent possible to me in my own humble way in bringing out—by God's Grace—and by the Blessings of the five Mahacharyas—most edifying six spiritual books both in Canarese and English languages to the the best of my sincere efforts in this laudable direction with catholicity in out-look. The list of spiritual books written and which are now

under print are given in the foregawn page preceding this page. In this connection I humbly submit that I am a very poor person having no sufficient means to get through these spiritual publications. It is roughly estimated to cost to the tune of Rs. 20,000 before the said books are released in the public. The optimistic view that **"Where there is a Will there is a Way"** is indeed heartening me, to stop not the solemn God's Mission undertaken by me until it is completed. Further, it is my heart's yearning just to present a pretty good number of my books to some of the prominent Universities, Public Libraries, Spiritual Organisations, to some of the distinguished and self awakened votaries in the spiritual realm and to some of the leading Heads of the Spiritual Mutts and Monasteries all over the Globe, despatching the same by Registered Air Mail direct to their respective addresses, in order to invoke their blessings and simultaneously to propagate and to assiduously propound our **Viswa—Dharma** among all mankind and thus, help ameliarating their mundane mental sufferings and to bring nearer to their hearts the **Holy Presence of the Divine Power and the Light Divine** which is in fact hidden in the inner most chambers of everybody's pure—heart and serene intellect. It is gratifying to bring to your kind notice that I have already collected about 250 addresses

of some of the prominent Universities situated all round the five Continents and got the same printed and this list is annexed at the end of my book on Essentials of Spiritualism. This is all my ambition in life. It is a known fact that such an herculian job in the Spiritual Field in the present day cannot be successfully executed and fulfilled without sufficient monetary help from the generous public, Heads of the Spiritual Mutts, and the Organisations which advocate the propagation of the Universal Philosophy and Viswa Dharma among all mankind freely and incessantly.

I therefore pray with folded hands in the Name of Viswa Dharma that you will be gracious enough to willingly extend your hands of hospitality and munificently contribute your mite in order to glorify the laudable causes with which I am wedded to and generously help to fulfil this "Gnana Yagna" successfully and be the blissful recipients of the Divine Blessings of the Most Supreme God Almighty Parasiva and as well as the Blessings of the most paramount Pontifical Heads viz., Srimad Jagadguru Renukadi Panchacharyas bounteously.

T. B. BASAVARAJAYYA
Author,
C/o M/s. Dharmaprakasha N. Rudriah & Sons
Mandy Merchants, New Tharagupet,
Bangalore-2

17—3—1973 Jagadguru Sri Renuka Jayanthi Day.

Shareera Maadyam : Khalu Dharma Saadhanam

ಶರೀರ ಮಾದ್ಯಂ ಖಲು ಧರ್ಮ ಸಾಧನಂ

Om Tath Sath.

॥ ಶ್ರೀ ಗಣೇಶಾಯ ನಮಃ ಶ್ರೀ ಗುರುಭ್ಯೋ ನಮಃ ॥

(a) ॥ ಸರ್ವಭೂತ ಹಿತೇ ರತಃ ॥
(b) ॥ ಅಭಯಂ ಸರ್ವ ಭೂತೇ ಭ್ಯೋ ।
ದಧ್ಯಾ ಮ್ಯೇತದ್ವ್ರತಂ ಮಮ ॥

ಎಂಬ ಭಗವಂತನ ಅಭಯವಾಣಿ ಸಮುದ್ರ ಘೋಷದಂತೆ ಸದಾ ಭೋರ್ಗರೆಯುತ್ತಲಿರುವುದು. ಇದಕ್ಕೆ ಅನುಗುಣವಾಗಿ

(c) ॥ ದಯವೇ ಧರ್ಮದ ಮೂಲವಯ್ಯಾ ।
ದಯವಿರಬೇಕು ಸರ್ವ ಪ್ರಾಣಿಗಳಲ್ಲಿ ॥

ಎಂಬ ಶ್ರೀ ಬಸವಣ್ಣನವರ ಅಮೃತವಾಣಿ ಪೂರಕವೂ, ಪ್ರೇರಕವೂ ಹಾಗೂ ಪೋಷಕವೂ ಆಗಿರುವುದು. ಮೇಲುಕ್ತವಾದ ಪ್ರತಿಪಾದನೆಗಳಿಗೆ ಪೀಠಿಕೆಯಾಗಿ

(d) ॥ ಮೃದು ವಚನಂಗಳೇ । ಸಕಲ ಜಪಂಗಳಯ್ಯಾ ।
ಮೃದು ವಚನಂಗಳೇ । ಸಕಲ ತಪಂಗಳಯ್ಯಾ ॥

ಎಂಬ ದೇವಮಾನವನ (ಶರಣನ) ಅಮೃತವಾಣಿ ನಿರಂತರ ಸ್ಮರಣೀಯವೂ ಆಪ್ಯಾಯನಕರವೂ ಎನಿಸಿರುವುದು ಅಸ್ತು.

ಸಮಾನ್ಯರೇ,

ದೈವ ಪ್ರೇರಣೆಯಂತೆ ಮಾನವನ ॥ ಸರ್ವ ದುಃಖ ನಿವೃತ್ತಿ । ಸಹಜವಾದ ಪರಮಾನಂದ ಪ್ರಾಪ್ತಿಗಾಗಿ ಮಾರ್ಗದರ್ಶಕವೆನಿಸಿ ಇದರೊಂದಿಗೆ ಅಡಕ ಮಾಡಿರುವ ಪಟ್ಟಿಯಲ್ಲಿ ಕಂಡುಬಂದ ಆರು ಆತ್ಮತುಲ್ಯವಾದ ಅಧ್ಯಾತ್ಮ ತತ್ವ ಪ್ರತಿಪಾದನೆಯ ಬಾಡದ ಗ್ರಂಥ ಕುಸುಮಗಳನ್ನು ಆತ್ಮೀಯವಾಗಿ ರಚಿಸಿ, ಕಳೆದ ವರ್ಷಗಳಿಂದಲೂ ಅವಿಚ್ಛಿನ್ನವಾಗಿ ತೈಲಧಾರಾಭಕ್ತಿಯಂತೆ ಇವುಗಳನ್ನು ಸ್ವತಃ ರಚಸಿ ಪ್ರಕಟಿಸಲು ಕಾರ್ಯೋನ್ಮುಖನಾಗಿರುತ್ತೇನೆಂದು ವಿನಂತಿಸಲು ಅತೀವ ಹರ್ಷವೆನಿಸುತ್ತಲಿದೆ.

1) ವಿಶ್ವಧರ್ಮವೆನಿಸಿದ ಸನಾತನವಾದ ಶಿವಾದ್ವೈತ ಅಥವಾ ಷಟ್ಸ್ಥಲ ಸಿದ್ಧಾಂತ ಜಗತ್ತಿನ ಆಸ್ತಿಕ ಮಹಾವೃಂದಕ್ಕೆ ತಾಯಿಯಂತೆ ಕಂಗೊಳಿಸಿ ಸರ್ವಧರ್ಮ ಸಮನ್ವಯವೂ, ಸಮ ಸಮುಚ್ಚಯವಾಗಿ, ಅವಿಕಾರ ಪರಿಣಾಮವಾದವೆನಿಸಿ ಜಗದಾದಿಯಿಂದಲೂ ಲಿಂಗೋದ್ಭವ ಜಗದ್ಗುರು ಸಾರ್ವಭೌಮರೆಂದು ಆಗಮಾಮ್ನಾಯಾದಿಗಳಲ್ಲಿ ಸ್ತುತ್ಯರೂ, ವಂದ್ಯರೂ ಆದ ಶ್ರೀ ರೇಣು

ಕಾದಿ ಪಂಚಾಚಾರ್ಯರುಗಳಿಂದ ಪ್ರತಿಪಾದಿತವಾಗಿದ್ದು ಕಾಲ ಪ್ರವಾಹದಲ್ಲಿ ಉಳಿದು ಬೆಳೆದು ಬರುತ್ತಾ ಕ್ರಿ.ಶ. ಹನ್ನೊಂದು ಹನ್ನೆರಡನೆ ಶತಮಾನ ಗಳಿಂದೀಚಿಗೆ ದೇವರ ದಾಸಮಯ್ಯಾ ಸಾಧ್ವಿಮಣಿ ದುಗ್ಗಲೆ ಶಂಕರ ದಾಸಮಯ್ಯ, ರಾಣಿ ಸುಗ್ಗಲೆ, ಹಾಗೂ ಶ್ರೀ ಬಸವಾದಿ ಪ್ರಮಥ ಗಣಾಧೀಶರುಗಳಿಂದ ಪರಿಪುಷ್ಟಿಯನ್ನು ಪಡೆದು ಕಲ್ಪವೃಕ್ಷದ ಹಾಗೆ ಷಟ್ಸ್ಥಲ ಮಹಾ ವೃಕ್ಷ ಬೆಳೆದು ದಿಗಂತವನ್ನು ವ್ಯಾಪಿಸಿ ರಾಮಣೀಯಕವಾಗಿ ಆಧ್ಯಾತ್ಮಿಕ ಗುರಿಗಳ ಸಾಧನೆಗೆ ಸುಮೇರುವಿನಂತೆ ಆಶ್ರಯ ಭೂತ ವೆನಿಸಿರುವುದು.

2) ಈ ತತ್ವ ಪ್ರಮುಖವಾದ Tower of universal Spiritualism ಎಂದೆನಿಸಿ, ಜಗತ್ತಿನ ಅಖಿಲ ಆಧ್ಯಾತ್ಮಿಕ ಧರ್ಮಗಳಿಗೆ ತಾಯ್ಮನೆಯಂತೆ ಅನಾದಿಕಾಲದಿಂದಲೂ ಮಾನ್ಯವವೆನಿಸಿ ವಿರಾಜಿತವಾಗಿದುವ ಮಹದಂಶ ಪಂಡಿತ ಪಾಮರರಾದಿಯಾಗಿ ಪ್ರಾಜ್ಞರಾದ ಎಲ್ಲಾ ಭಾರತೀಯ ರಿಗೂ ಮನನೀಯವಾದ ಮಹದಂಶವಾಗಿ ವಿರಾಜಿತವಾಗಿದೆ. ಈ ಕಾರಣ ದಿಂದಾಗಿ ಜಗದಾದ್ಯಂತ ಎಲ್ಲಾ ಮಾನವಕೋಟಿಗಳ ಆತ್ಮ ಕಲ್ಯಾಣ ಆತ್ಮೋ ದ್ಧಾರಾರ್ಥ, ಕನ್ನಡ ಮತ್ತು ಆಂಗ್ಲ ಭಾಷೆಗಳಲ್ಲಿ ಶ್ರೀ ಗುರು ಪ್ರೇರಣೆಯಂತೆ ಈ ವಿನಂತಿ ಗ್ರಂಥವನ್ನು ರಚಿಸಿ, ಪ್ರಕಟಿಸಿ, ಸರ್ವತ್ರ ನಿಷ್ಠಾ ಭಕ್ತಿಯಿಂದ ಪ್ರಚಾರ ಮಾಡುವ ಹೊಣಗಾರಿಕೆಯನ್ನು ಪರಮಾತ್ಮನು ನನ್ನ ಪಾಲಿಗೆ ಬಂದ ಪರಮಾನ್ನವಾಗಿ ಅನುಗ್ರಹಿಸಿರುವನು.

ಮೇಲ್ಕಂಡ ಆರು ಗ್ರಂಥಗಳು ಸದ್ಯ ಅಚ್ಚಿನಲ್ಲಿದ್ದು ಅರ್ಧರ್ಧ ಭಾಗ ಈಗಾಗಲೇ ಪ್ರಿಂಟಾಗಿರುವುವು. ಕೇವಲ ಸದ್ಧರ್ಮ ಪ್ರಚಾರ ದೃಷ್ಟಿಯನ್ನೇ ಧ್ಯೇಯವಾಗುಳ್ಳ ನಾನು, ಈ ಗ್ರಂಥಗಳನ್ನು ಸ್ವಾತ್ಮ ಪ್ರೀತಿ ಪೂರ್ವಕ ಸರ್ವತ್ರ ಪ್ರಕಾಶಗೊಳಿಸುವ ಉದ್ದಿಶ್ಯ ವಿಶ್ವದ 5 ಖಂಡಗಳಲ್ಲಿ ಪ್ರಧಾನವಾದ ಸುಮಾರು 250 ವಿಶ್ವ ವಿದ್ಯಾಲಯಗಳ ವಿಳಾಸಗಳನ್ನು ಸಂಗ್ರಹಿಸಿ ಪ್ರಿಂಟು ಮಾಡಿಸಿ, ಈ ಪಟ್ಟಿಯನ್ನು ನನ್ನ ಆಂಗ್ಲ ಗ್ರಂಥ "ಎಸೆಂಷಿಯಲ್ಸ್ ಆಫ್ ಸ್ಪಿರಿಚುವಲಿಜಂ" ಎಂಬುದರಲ್ಲಿ ಅಡಕ ಮಾಡಿದ್ದೇನೆ. ಮತ್ತು ವಿಶ್ವದ ಪ್ರಧಾನ ಗ್ರಂಥ ಭಂಡಾರಗಳಿಗೂ, ಹಿರಿಯ ಆತ್ಮವೇತ್ತರಾದ ಮಹೋದಯರಿಗೂ, ಪ್ರಮುಖ ಮಠ ಮಂದಿರಗಳ ಅಧ್ಯಕ್ಷ ಮಹಾ ಪೂಜ್ಯ ಪಾದಂಗಳರವರಿಗೂ, ಪತ್ರಿಕಾಕರ್ತರುಗಳಿಗೂ, ಉಚಿತವಾಗಿ ಅಂಚೆಮೂಲಕ ಕಳುಹಿಸಿ, ಎಲ್ಲ ಶ್ರೀಗಳ ಹಾಗೂ ಸಭ್ಯರ ಆಶೀರ್ವಾದ ಬೆಂಬಲಗಳನ್ನು ಹೃತ್ಪೂರ್ವಕ ಕೋರುತ್ತೇನೆ.

ಓಂ

## ಗಮನಾರ್ಹ

|| ಶ್ರೀ ಗುರುವಿಗಿಂತಲೂ ಶಿಷ್ಯ ಅರಿವುಳ್ಳವನಾದರೂ
ಆ ಮಹಾಗುರುವಿಂಗೆ ಭೃತ್ಯನೇ ಹೊರತು
ಕರ್ತನಾಗಲಾರನಯ್ಯಾ ||

( ಎಡಯೂರು ತೋಂಟದ ಶ್ರೀ ಸಿದ್ಧಲಿಂಗೇಶ್ವರರು )

---

## ಶ್ರೀ ಗುರುಪಾದ ದ್ವಯಮೇ ದೈವಂ

( ಶ್ರೀ ಮೊಗ್ಗೆಯ ಮಾಯಿದೇವ ಶಿವಾಚಾರ್ಯರು )

---

ಕಾಣದುದ ನರಸಿ ಸಿಕ್ಕಲಿಲ್ಲ |
ವೆಂಬ ಬಳಲಿಕೆಯ ನೋಡಾ !
ಕಂಡುದನೆ ಕಂಡು ಶ್ರೀ ಗುರು |
ಪಾದವ ಹಿಡಿದಲ್ಲಿ ಕಾಣದುದ |
ಕಾಣ ಬಹುದು ಗುಹೇಶ್ವರಾ ||

( ಶ್ರೀ ಅಲ್ಲಮ ಪ್ರಭುದೇವರು )

ಓಂ

|| ಶ್ರೀ ಷಟ್ಸ್ಥಲೋದ್ಯನ್ಮಣಿಂ ||

|| ಶ್ರೀ ಗೋಪ್ಯ ಚಿಂತಾಮಣಿಂ ||

|| ಶ್ರೀ ಸಿದ್ಧಾಂತ ಶಿಖಾಮಣಿಂ ||

|| ಜೀವೇಶ್ವರ ಯೋಗ ಪದ್ಮತರಣಿಂ || (ಸಿ ಶಿ)



|| ಮಣಿಶ್ಚಿಂತಾಮಣಿ ರ್ದಿವ್ಯಃ |
ಕಿಮನ್ಯೈ ಗ್ರಂಥಕೋಟಿ ಭಿ ||
ಯಃ ಸ್ವಯಂ ಶ್ರೀ ರೇಣುಕಸ್ಯ |
ಮುಖಾಮೃತಾದ್ವಿನಿರ್ಗತಃ ||
ಜಯಸಿದ್ಧಾಂತ ಶಿಖಾಮಣಿ |
ಜಯ ಸುಧಾಮಣಿ ||
ಜೀವನಾಂಧಕಾರವ ನಿರದೆ |
ಕಳೆವ, ಕಿರಣ ಶ್ರೇಣಿ || (ಜೀ ಸಿ)

ಕರಸ್ಥಲದ ಕುರುಹಾಗಿ, ಉರಸ್ಥಲದ ಅರುಹಾಗಿ, ಶಿರಸ್ಥಲದ ಹೊಳಹೊ ತಾನಾಗಿ; "ನಿಜ ಪದಂ ಕರಬಿಲ್ವ ಫಲಂ" ಎಂಬಂತೆ, ಥಳ ಥಳಿಸುವ ಸ್ವಯಂದ್ಯುಮಣಿ ಶ್ರೀ ಸಿದ್ಧಾಂತ ಶಿಖಾಮಣಿ. ಇದುವೇ ಶ್ರೀ ಸಿದ್ಧಾಂತಾಗಮದ ರಮಣೀಯ ಕಣ್ಮಣಿ, ಚಿನ್ಮಣಿ, ಮನೋನ್ಮಣಿ, ಮಹೋನ್ಮಣಿ. ಈ ದಿವ್ಯ ಸುಧಾಮಣಿಗಾಗಲಿ ಸದಾ ಜಯೀಭವ ! ದಿಗ್ವಿಜಯೀಭವ !!

|| ಸುಹೃದೈಶ್ವರ್ಯಾನು ಭೂತಿ |
ಪ್ರಭಾಧಾಮ ಶ್ರೀ ಗುರುಧಾಮ ||

॥ ಶ್ರೀ ಚಾಮುಂಡಾಂಬಾಯೈ ನಮಃ ॥

ಜೈ ಶ್ರೀ ಜಗಜ್ಜನನೀಂ !

॥ ಓಂಕಾರ ಪಂಜರ ಶುಕೀಂ | ಉಪನಿಷದುದ್ಯಾನ ಕೇಳಿ ಕಲಕಂಠೀಂ |
ಆಗಮ ವಿಪಿನ ಮಯೂರೀಂ | ಆರ್ಯಾಂ ಅಂತರ್ಭಾವಯೇ ಗೌರೀಂ ॥

# ಉಪಸಂಹಾರ

॥ ಧರ್ಮೇಣ ಲಭತೆ ಸರ್ವಂ ॥

Need of the hour :— ಈ ಘಳಿಗೆಗೆ ಅತ್ಯಾವಶ್ಯಕವಾಗಿ ಬೇಕಾದುದು ಧರ್ಮದರಿವು. ಸಜ್ಜನರಿಗೆ ||ಧರ್ಮವೇ ಜೀವನಂ ಸಜ್ಜನಾನಾಂ|| ಎಂಬಂತೆ ಜೀವನದ ಮಹಾ ಚೈತನ್ಯವೆನಿಸಿರುವುದು. 'ಚೈತನ್ಯಂ ಬ್ರಹ್ಮ' ಎಂದು ಉಪನಿಷದ್ವಾಣಿ ಘರ್ಜಿಸುತ್ತಲಿರುವುದು. ಇದರಿಂದಾಗಿ ದೇವ, ಮಾನವ, ದಾನವಾದಿಗಳಿಗೆ ಧರ್ಮವು ಸರ್ವಸ್ವವೆನಿಸಿರುವುದು. || ಧರ್ಮೋ ರಕ್ಷತಿ ರಕ್ಷಿತಃ ||

> ವಿಶ್ವಾಚಾರ್ಯರಾದ ಆದಿ ಜಗದ್ಗುರು ಶ್ರೀ ರೇಣುಕ ಭಗವತ್ಪಾದ ಸಾರ್ವಭೌಮರು || ಸ್ಥಾಪಕಾಯಚ ಧರ್ಮಸ್ಯ | ಸರ್ವ ಧರ್ಮ ಸ್ವರೂಪಿಣೇ | ಅವತಾರ ವರಿಷ್ಠಾಯ | ಶ್ರೀ ಭಗವತ್ಪಾದ ರೇಣುಕಾಚಾರ್ಯಾಯ ನಮಃ || ಎಂಬಂತೆ

ಶಿವನಾಜ್ಞೆಯಂತೆ ಶಿವಲಿಂಗ ಮುಖದಿಂದ ಇಚ್ಛಾಮಾತ್ರದಲಿ, ಲೀಲಾಜಾಲವಾಗಿ ಭುವಿಯಲ್ಲಿ ಅವತರಿಸಿ, ಸರ್ವ ಧರ್ಮ ಸಮನ್ವಯವಾಗಿ ಬೆಳಗುವ ವಿಶ್ವ ಧರ್ಮವನ್ನು ಅಂದರೆ, ಅಧ್ಯಾತ್ಮ ವಿದ್ಯೆಗೆ ತಾಯ್ಮನೆಯಂತಿರುವ ಶಿವಾದ್ವೈತ ಸಿದ್ಧಾಂತವನ್ನು; ಮುನಿಕುಲ ಚಂದ್ರನೂ, ಸಪ್ತರ್ಷಿ ಮಂಡಲದ ಅಧಿನಾಯಕನೂ ಆದ, ಆದಿ ಶ್ರೀ ಅಗಸ್ತ್ಯ ಮಹರ್ಷಿಗಳಿಗೆ ಕರುಣೆಯಿಂದ ಜಗದುದ್ಧಾರಾರ್ಥ ಹಾಗೂ ಸಮಸ್ತ ಮಾನವರ ಕಲ್ಯಾಣಾರ್ಥ ಉಪದೇಶಿಸಿರುವರು. ಷಟ್‌ಸ್ಥಲಾತ್ಮಕವೂ, ಲಿಂಗಾಂಗ ಸಾಮರಸ್ಯ ರೂಪವಾದ ಮಹೋನ್ನತ ಧರ್ಮವನ್ನು ಆದಿ ಶ್ರೀ ದಧೀಚಿ, ಶ್ರೀ ಸನಂದ, ಶ್ರೀ ವ್ಯಾಸಾಚಾರ್ಯ, ಶ್ರೀ ದೂರ್ವಾಸ ಪ್ರತಿಭಾವಂತರಾದ ಮಹರ್ಷಿಗಳಿಗೂ, ಗೌತಮ, ವಶಿಷ್ಠಾದಿ ಋಷಿ ಪುಂಗವರಿಗೂ ಹಾಗೂ ಅದ್ವೈತ ಮತಸ್ಥಾಪನಾಚಾರ್ಯ ಶ್ರೀ ಶೃಂಗೇರಿ ಜಗದ್ಗುರು ಆದಿ ಶ್ರೀ ಶಂಕರಾಚಾರ್ಯರೇ ಮೊದಲಾದ ಭಾಷ್ಯಕರ್ತೃಗಳಿಗೂ, ಶಿವಾದ್ವೈತ ಸಿದ್ಧಾಂತದ ಸಾರಸರ್ವಸ್ವವನ್ನು

ಹೃದಯಂಗಮವಾಗಿ ಶ್ರೀ ಮಜ್ಜಗದಾದಿ ಜಗದ್ಗುರು ಪಂಚಾಚಾರ್ಯರು ಕೃಪಾಪೂರಿತ ಭಾವದಿಂದ ಉಪದೇಶಿಸಿರುವರು

ಶ್ರುತ್ಯುಕ್ತವಾದ ವೀರಶೈವ ಧರ್ಮವು || ಧರ್ಮೋಲಿಂಗಾರ್ಚನಾತ್ಮಕಃ || ಎಂದು ಆತ್ಮೇಷ್ಟ ಲಿಂಗವನ್ನು ಸತತ ಅನನ್ಯ ಭಕ್ತಿ ಭಾವದಿಂದ ಪೂಜಿಸಿ, ಸ್ತುತಿಸಿ, ಧ್ಯಾನಿಸುವ ಮೂಲಕ ಈ ಜನ್ಮದಲ್ಲೇ ಮೋಕ್ಷ ಸಾಮ್ರಾಜ್ಯವನ್ನು ಹೊಂದಬಹುದೆಂಬ ಸಿದ್ಧಾಂತವನ್ನು ಆಗಮ್ನಾಯಾದಿಗಳ ಶ್ರೇಷ್ಠ ಆಧಾರದ ಮೇಲೆ ಹೃದಯಂಗಮವಾಗಿ ನಿರೂಪಿಸಿ, || ಲಿಂಗಾಂಗ ಸಂಗಿನೋ ವತ್ಸಾ | ಪುನರ್ಜನ್ಮ ನ ವಿಧ್ಯತೆ || ಎಂಬ ಶಿವಾಗಮೋಕ್ತಿಯ ಹೃದಯವನ್ನು ಸುಲಿದ ಬಾಳೆಯ ಹಣ್ಣಿನಂದದಿ ಚಿತ್ತರಿಸಿರುವರು.

ಪಂಚ ಮಹಾಚಾರ್ಯವರೇಣ್ಯರು ಶಿವಸಿದ್ಧಾಂತವನ್ನು ಅಖಂಡ ವಿಶ್ವದಾದ್ಯಂತ ಪ್ರಚಾರಮಾಡಿ, ಇಷ್ಟಲಿಂಗ ಪೂಜಾ ವಿಧಿ ವಿಧಾನಗಳನ್ನು ಸರ್ವತ್ರ ಪ್ರಚಲಿತವಾಗಿ ಉಳಿಸಿ ಬೆಳೆಸಬೇಕೆಂದು ಸಾರಿ, || ಸ್ಥಾಪಯಿಷ್ಯಸಿ ಭೂಲೋಕೇ | ಸರ್ವೇಷಾಂ ಹಿತಕಾರಕಂ || ಎಂದು ಅಪ್ಪಣೆಯನ್ನು ದಯ ಪಾಲಿಸಿರುವುದು, ಸಮಸ್ತ ಲಿಂಗಾಂಗಿಗಳಿಗೆ ಅನ್ವಯಿಸಿದ ಜೀವಂತ ಆಜ್ಞೆಯೇ ಆಗಿರುವುದು. ಈ ಕಾರಣದಿಂದ ಶ್ರೀ ರೇಣುಕ ಗೀತೆಯನ್ನು ವಿಶ್ವದಾದ್ಯಂತ ಅನೇಕ ಭಾಷೆಗಳಲ್ಲಿ ಪ್ರತಿ ಶಬ್ದಾರ್ಥ ಸಹಿತ, ಸರ್ವ ಧರ್ಮ ಸಮನ್ವಯ ದೃಷ್ಟಿಕೋನದಿಂದ ಗಂಭೀರವಾದ ಭಾಷ್ಯಾದಿಗಳನ್ನು ಲಿಂಗಾಂಗಿಗಳಲ್ಲಿ ಅನೇಕರು ಅಲ್ಲಲ್ಲಿ ಮುಂದೆ ಬಂದು ನಿಷ್ಠೆಯಿಂದ ರಚಿಸಿ, ಅಂತರಂಗದಲ್ಲಿ ದಿವ್ಯ ಬೆಳಕನ್ನು ಕಂಡು, ಯದ್ವತ್ ಶ್ರೀ ಬಸವಾದಿ ಶಿವಶರಣ ಶ್ರೇಷ್ಠರು ಈ ಮಹತ್ತರವಾದ ಘನತತ್ವದ ರಸಾಮೃತವನ್ನು ಪಾನಮಾಡಿ, ಆಚರಿಸಿ, ಸಿದ್ಧರೂ, ಪ್ರಬುದ್ಧರೂ, ಜಗನ್ಮಾನ್ಯರೂ, ಮುಕ್ತರೂ ಆದರೊ ತದ್ವತ್ ಈ ಷಟ್‌ಸ್ಥಲ ಜ್ಞಾನಾಮೃತವನ್ನು ಭಕ್ತ ಕೋಟಿಯಲ್ಲಿ, ಆಸ್ತಿಕ ವೃಂದದಲ್ಲಿ ಬೋಧನೆಮಾಡಿ, ||ಸರ್ವೇಷಾಂಹಿತಕಾರಕಂ|| ಎಂಬಂತೆ, ಲೋಕೋತ್ತರವಾದ ಕೀರ್ತಿಪುಂಜರಾಗಬೇಕೆಂದೂ ಈ ಧರ್ಮದ ಪರಮ ಪೂಜ್ಯ ಹಾಗೂ ಪೂಜ್ಯ ಶ್ರೀ ಶ್ರೀಗಳವರ ಅಡಿದಾವರೆಗಳಲ್ಲಿ ಮತ್ತು ಘನವಿದ್ವನ್ಮಣಿಗಳಲ್ಲೂ ಮತ್ತು ಸದ್ಗೃಹಸ್ಥರಲ್ಲಿ ಶಿವಾನುಭಾವಿಗಳಾದ ಆತ್ಮಬಂಧುಗಳಲ್ಲೂ ನಾನು ಬದ್ಧಾಂಜಲಿ ಪುಟನಾಗಿ ವಿನಯದಿಂದ ವಿನಂತಿಸಿಕೊಳ್ಳುತ್ತೇನೆ. ಗೀತಾ ಚಾರ್ಯನಾದ ಶ್ರೀಕೃಷ್ಣನು || ಕಲ್ಯಾಣ ಕೃತ್ಕಶ್ಚಿತ್ | ದುರ್ಗತಿಂ ತಾತ ನ ಗಚ್ಛತಿ || ಎಂದು ಗೀತೆಯಲ್ಲಿ ಸಾರಿರುವನು. ಶಿವಾದ್ವೈತ ವಿದ್ವಾಂಸರು,

ಕೋವಿದರು, ಶಿವಾನುಭವಿಗಳು, ಧರ್ಮಿಷ್ಠರಾದ ಶ್ರೀಮಂತರ ಸಹಾಯವನ್ನು ಅಲ್ಲಲ್ಲಿ ಪಡೆದು, ನಿಸ್ಪೃಹಭಾವದಿಂಡ ಶ್ರೀ ರೇಣುಕಾಚಾರ್ಯರ ಸಾಕ್ಷ್ಯತ್ವದಲ್ಲಿ ಅವಧಾನ ಭಕ್ತಿಯಿಂದ ನಿಗಮಾಗಮಗಳ ಹಾಗೂ ವಚನೋಪನಿಷತ್ತುಗಳ ಸಾರಾಮೃತಗಳನ್ನು ಸಂದರ್ಭಾನುಸಾರ ಬಳಸಿಕೊಂಡು, ಮಹಾಚಾರ್ಯರ ಅಮೃತವಾಣಿಗೆ ಪ್ರಾಧಾನ್ಯವನ್ನಿತ್ತು, ಸುಂದರ, ಸರಳ ಶೈಲಿಯಲ್ಲಿ ಭಾಷ್ಯಾಮೃತವನ್ನು ಪಂಡಿತ ಪಾಮರರಿಗೂ ಆಪ್ಯಾಯನಕರವಾಗಿದ್ದು, Self study ಸ್ವತಃ ಅಧ್ಯಯನ ಮಾಡುವುದರಿಂದಲೇ ಗುರುತರವಾದ ಭಾವಾನ್ವಿತರಾಗಿ ಪಂಡಿತರಾಗಲು ಅನುವಾಗುವಂತೆ ಭಾಷ್ಯಾದಿಗಳ ರಚನಾ ಶೈಲಿ ವೀರ್ಯವತ್ತರವಾಗಿರಬೇಕೆಂದು ಆಶಿಸುತ್ತೇನೆ. ಇದರ 21 ಪರಿಚ್ಛೇದಗಳನ್ನು ಮೂರು ಭಾಗಗಳಾಗಿ ವಿಂಗಡಿಸಿ, ಪ್ರತಿ ಭಾಗದಲ್ಲಿ ಏಳೇಳು ಪರಿಚ್ಛೇದಗಳಿಗೆ ಕನ್ನಡ, ಆಂಗ್ಲ ಭಾಷೆಗಳಲ್ಲಿ ಶಬ್ದಾರ್ಥ ಸಹಿತ ಗಂಭೀರವಾದ ರೀತಿಯಲ್ಲಿ ಭಾಷ್ಯ ರಚನೆಯಾಗಬೇಕಾಗಿರುತ್ತೆ. ಪ್ರಸ್ಥಾನತ್ರಯಗಳಿಗೆ ಶ್ರೀ ರೇಣುಕ ಭಾಷ್ಯ, ಶ್ರೀ ದಾರುಕ ಭಾಷ್ಯಾದಿಗಳು ಸಧ್ಯ ಕಣ್ಮರೆಯಾಗಿರುವ ಕೊರತೆಯನ್ನು ಶ್ರೀ ರೇಣುಕ ಗೀತೆಗೆ, ಪ್ರಸ್ಥಾನತ್ರಯಗಳಲ್ಲಿ ಅಂತರ್ಗತವಾಗಿರುವ ಶಿವಾದ್ವೈತ ಸಿದ್ಧಾಂತದ ನೆಲೆಕಲೆಗಳನ್ನು ಗುರ್ತಿಸುವ ರೀತಿಯಲ್ಲಿ ಸರ್ವ ಧರ್ಮ ಸಮನ್ವಯ ಭಾವದಿಂದ ಸುಮನೋಹರವಾದ ನೂತನವಾದ ಭಾಷ್ಯಾದಿಗಳು ಅನಂತ ವಿದ್ವತ್ ಮುಖಗಳಿಂದ ಸದಯಭಾವದಿಂದ ಭಾರತದ ಅನೇಕ ಪ್ರಾದೇಶಿಕ ಭಾಷೆಗಳಲ್ಲಿ ರಚಿಸಿ, ಹೃದಯಂಗಮಗೊಳಿಸಿಕೊಂಡು ಅವರವರು ಶಕ್ತ್ಯಾನುಸಾರ ಆದಷ್ಟು ಆಚರಣೆಯಲ್ಲಿ ತರುವುದು ಫಲಪ್ರದವೆನಿಸಿರುತ್ತೆ.

|| ಸ್ವಲ್ಪಮಪ್ಯಸ್ಯ ಧರ್ಮಸ್ಯ | ತ್ರಾಯತೇ ಮಹತೋ ಭಯಾತ್ ||
ಎಂಬ ಗೀತಾಚಾರ್ಯನ ಅಮೃತವಾಣಿ ಸಂಸ್ಮರಣೀಯವಿರುವುದು.

|| ಸ್ವಲ್ಪಮಪ್ಯಸ್ಯ ಧರ್ಮಸ್ಯ || ಅಂದರೆ, ಸ್ವಧರ್ಮಾನುಷ್ಠಾನದ ಸ್ವಲ್ಪ ಅರಿವು ಅನುಭವಗಳು ನಮ್ಮಲ್ಲಿ ಊರ್ಜಿತಗೊಂಡರೆ, ತತ್ಪರಿಣಾಮವಾಗಿ "ವಸಂತೀ ವಾಚ್ಛೇತೋಹ್ರದ | ಭುವಿ ಶಿವಾನಂದಲಹರೀ" ಎಂಬಂತೆ, ಧರ್ಮದ ದಶಮುಖಗಳೂ ನಮ್ಮ ಅಂತರಂಗದಲ್ಲಿ ಉಕ್ಕೇರಿ ಪ್ರಸನ್ನವಾಗುವುವು. ತತ್ಪರಿಣಾಮವಾಗಿ ಸಾಕ್ಷಾತ್ ಮೋಕ್ಷಾನಂದವು || ಕರ ಬಿಲ್ವ ಫಲಂ ಶಿವಾಥವಾ || ಎಂಬಂತೆ ಲಿಂಗಾಂಗ ಸಾಮರಸ್ಯಾನಂದವು ಸ್ವಾನುಭೂತಿಯಲ್ಲಿ ವಿಜೃಂಭಿತವಾಗಿ || ಸ್ವಸ್ವರೂಪ ಚಿಚ್ಛಕ್ತಿಯಿಂ | ಸ್ಫುರಿಸುತಿರ್ಪದದ್ವೈತ ಪರಮಾತ್ಮ ತತ್ತ್ವಂ|| ಅಂದಹಾಗೆ ಪರಮೈಕ್ಯಸ್ಥಲದ ಅಂಗನು (ಜೀವಾತ್ಮನು) ತಾನೇ ತಾನಾಗಿ ಪರಶಿವ ತತ್ವದಲ್ಲಿ ಸೌಮ್ಯ ಸಾಮರಸ್ಯದಿಂದ ||ಸಾಯುಜ್ಯಂ ಮಮ ಸಿದ್ಧಮತ್ರ | ಭವತಿ ಸ್ವಾಮಿ ಭವಾನೀಪತೇ ! ಕೃತಾರ್ಥೋಸ್ಮ್ಯಹಂ||

ಅಂದಹಾಗೆ ನಿನ್ನ ನಿರಂತರ ಧ್ಯಾನದಿಂದ ಸಾಯುಜ್ಯ ಮುಕ್ತಿಯೂ ನನಗೆ ಇಲ್ಲಿಯೇ ಸಿದ್ಧಿಸುವುದೆಂಬುದು ಸತ್ಯವಹುದು.

ಅಷ್ಟೇ ಆಸಕ್ತಿಯಿಂದ ಭರತ ಖಂಡದ ಸಮಸ್ತ ಆಸ್ತಿಕ ವೃಂದದ ಹೃನ್ಮಂದಿರದಲ್ಲಿ ಷಟ್‌ಸ್ಥಲ ಸಿದ್ಧಾಂತದ ಸಾರಸರ್ವಸ್ವ, ಸ್ವಚ್ಛಂದವಾಗಿ ಬೆಳಗುವ ರೀತಿಯಲ್ಲಿ ಪ್ರಚಾರ, ಪಾಠ, ಪ್ರವಚನೆಗಳು ಪ್ರತಿ ದಿವಸವೂ ಮೂಲೆ ಮೂಲೆಗಳಲ್ಲಿ, ಅವರವರ ಆತ್ಮೋದ್ಧಾರಾಥ ಜರುಗಬೇಕಾಗಿದೆ. ಇದಕ್ಕೆ ಲಿಂಗಾಂಗಿಗಳಲ್ಲಿ ಘನಪಂಡಿತರೂ, ಗುರು ವರ್ಗದ ಹಾಗೂ ವಿರಕ್ತ ವರ್ಗದ ಮಠಾಧಿಪತಿಗಳೂ, ಉಪಾಚಾರ್ಯರುಗಳೂ, ಪ್ರಾಜ್ಞರೂ ಶಿವಾನುಭಾವಿಗಳಾದ ಸದ್ಗೃಹಸ್ಥರೂ, ಮಹಾಚಾರ್ಯರ ಹೆಸರಿನಲ್ಲಿ ಸಂಕಲ್ಪಮಾಡಿ, ಕೈಗೆ ಈ ಬಗ್ಗೆ ಮಂಗಳ ಕಂಕಣವ ಧರಿಸಿ, ವಿರಾಗಿಗಳ ಹಾಗೆ ತತ್ವಪ್ರಚಾರಕ್ಕಾಗಿ ಹೊರಬರಬೇಕು. ಶ್ರೀ ಮಹಾ ಗುರುವಿನ ಏಕೈಕ ಆಜ್ಞೆಯನ್ನು ಶಿರಸ್ಸಿನಲ್ಲಿ ಧರಿಸಿ, ಯಶಸ್ವಿಯಾಗಿ, ಅಂದು ಕಲ್ಯಾಣದ ಶ್ರೀ ಬಸವಾದಿ ಪ್ರಮಥ ಶ್ರೇಷ್ಠರು ಮಾಡಿದ ಹಾಗೆ. ಧಾರ್ಮಿಕ ಕ್ರಾಂತಿಯನ್ನು ಸತ್ವಯುತವಾಗಿ ಐಕಮತ್ಯದಿಂದ ಇಂದು ಮಾಡಬೇಕು. ಸ್ವಧರ್ಮ ನಿಷ್ಠೆ, ಪರಧರ್ಮ ಸಹಿಷ್ಣುತಾಭಾವದಿಂದ ಮಾಡಬೇಕು ಈ ಮಹಾ ಕ್ರಾಂತಿ ಭಕ್ತಿಭರಿತ, ಪ್ರೇಮ ಪೂರಿತವಾಗಿದ್ದು, ವಿಶಾಲಭಾವದಿಂದ ಕೂಡಿರಬೇಕು. ಎಲ್ಲರೂ ಇದರಲ್ಲಿ ಭಾಗಿಗಳಾಗಿ, ಕೃತಕೃತ್ಯರಾಗಬೇಕು. ಇದು ನನ್ನ ಹೃದಯ ಕುಹರದಿಂದ ಹೊರಹೊಮ್ಮಿದ ವಿನಂತಿ.

ಶ್ರೀ ರೇಣುಕ ಗೀತೆ, ಗೀತೆಯಾಗಿಯೇ ಉಳಿಯದೆ ಸಕಲಾಗಮೋಪನಿಷದಾದಿಗಳ ಹೃದಯದ ತಿರುಳೆನಿಸಿ, ಶಿವಸಿದ್ಧಾಂತವೆನಿಸಿ, ಯುಗಾಂತರಗಳಿಂದ ಅಚ್ಚಳಿಯದೆ ಬೆಳಗಿ || ಸಮಸ್ತ ಸುರಾಸುರ ಮಾನವರ ಉದ್ಧಾರಣಾರ್ಥ || ಮಹಾತಾರಕವೆನಿಸಿ ದಿವ್ಯಾಮೃತದಂತಿದೆ. ಆದ್ದರಿಂದ ಧಾರ್ಮಿಕ. ಸಾಮಾಜಿಕ, ಹಾಗೂ ರಾಜಕೀಯ ರಂಗಗಳಿಗೆ ಅನ್ವಯಿಸಿ ಆಬಾಲವೃದ್ಧರೂ, ಸ್ತ್ರೀಜನ ಸ್ತೋಮದವರಿಗೂ, ಸುಜ್ಞಾನಮಯ ದೀಪದ, ಸ್ವಯಂಜ್ಯೋತಿಯ ದರ್ಶನ ಅವರವರ ಅಂತರಂಗಗಳಲ್ಲಿ ಉಕ್ಕೇರುವಂತೆ ಭಾಷ್ಯರಚನೆ ಪ್ರೇರಕವಾಗಬೇಕು. ಆಗ ಸಫಲವೆನಿಸುವುದು.

ಇದಕ್ಕೆ ಶಬ್ದಾರ್ಥಗಳೊಂದಿಗೆ ವಿಪುಲವಾದ ಭಾಷ್ಯರಚನೆ ಸಂಸ್ಕೃತ, ಆಂಗ್ಲ, ಕನ್ನಡ, ಮಹಾರಾಷ್ಟ್ರ, ಆಂಧ್ರ, ತಮಿಳು, ಹಿಂದಿ, ಇತ್ಯಾದಿ ಭಾಷೆಗಳಲ್ಲಿ ಅತ್ಯಾವಶ್ಯಕವಾಗಿ ಆಗಬೇಕು. ಪ್ರತಿ ಪ್ರಾದೇಶಿಕ ಭಾಷೆಯೊಂದಿಗೆ

ಲಿಂಗ್ಲದಲ್ಲೂ ರಚನಾತ್ಮಕವಾದ ವಿವರಣೆಯಿರಬೇಕು. ॥ ಸಂಘೇ ಶಕ್ತಿಃ ಕಲೌಯುಗೇ ॥ ಎಂದಿರುವುದರಿಂದ ಅಖಿಲಭಾರತ ವೀರಶೈವ ಮಹಾಸಂಸ್ಥೆಯವರೂ; ಶ್ರೀ ಬಸವ ಸಮಿತಿ ಸಂಸ್ಥೆಯವರೂ, ಸಮಸ್ತ ವಿದ್ಯಾಪೀಠಗಳ ಕರ್ತೃಗಳೂ; ಶ್ರೀಗುರುಪೀಠ ಹಾಗೂ; ಶ್ರೀಹರಗುರುಚರಮೂರ್ತಿಗಳೂ ಮತ್ತು ಅಖಿಲ ಭಕ್ತವೃಂದದವರೂ, ಒಮ್ಮನಸ್ಸಿನಿಂದ ಸಹಕರಿಸಿ, ಶ್ರೀರೇಣುಕ ಗೀತಾ ತತ್ವಾಮೃತವನ್ನುಮೇಲ್ಕಂಡಂತೆ, ಸುವ್ಯವಸ್ಥೆಯಿಂದಲೂ, ಕಾಯ ಪರಿಶ್ರಮದಿಂದಲೂ ಮತ್ತು ಘನತ್ಯಾಗದಿಂದಲೂ ನಿರಹಂಭಾವ, ದಾಸೋಹಂಭಾವದಿಂದ ಶ್ರೀ ಶಿವಸಿದ್ಧಾಂತ ಶಿಖಾಮಣಿಯೊಳಗೆ ಅಂತರ್ಗತವಾಗಿರುವ ವಿಶ್ವಧರ್ಮವನ್ನು ವಿಶ್ವದ ಮಾನವಕೋಟಿಗೆ ಬೋಧಿಸಲು ಮುಂದಾಳುಗಳಾಗಬೇಕೆಂದು ಧರ್ಮದ ಹೆಸರಿನಲ್ಲಿ ಬೇಡುತ್ತೇನೆ. ॥ ನಿರ್ವೀರಂ ಉರ್ವೀತಲಂ ॥ ಎನ್ನಲು ಬರುವಂತಿಲ್ಲ, ಶ್ರೀ ಮಹಾಚಾರ್ಯರ ಕೃಪೆ ಈ ಮಹಾ ಕಾರ್ಯಕ್ಕೆ ಉತ್ತೇಜನವೀಯಲಿ.

ಕೊನೆಯದಾಗಿ ಧರ್ಮಕ್ಷೇತ್ರವೆನಿಸಿದ ಭರತಖಂಡದ ಪ್ರಮುಖ ಆಧ್ಯಾತ್ಮ ಕ್ಷೇಂದ್ರಗಳು, ಹಿರಿಯ ವಿದ್ಯಾ ಕ್ಷೇಂದ್ರಗಳ, ಹಾಗೂ ವೀರಶೈವ ಸಾಹಿತ್ಯ ಪರಿಷತ್ತಿನಂಥಾ ಗಣ್ಯಸಂಸ್ಥೆಗಳ ಮುಖ್ಯಾಧಿಕಾರವರ್ಗದ ವಿದ್ವನ್ಮಣಿಗಳೂ, ಪ್ರಾಜ್ಞರೂ ಸ್ವಧರ್ಮಪರಿಪಾಲನಾದೃಷ್ಟಿ, ಹಾಗೂ ಪ್ರಚಾರ ದೃಷ್ಟಿಗಳಿಂದ ಈ ಬಗ್ಗೆ ಸಾಕಷ್ಟು ಗಮನ ನೀಡಿ, ಪ್ರಯತ್ನಶೀಲರಾಗಿ, ಭಗ್ನಮನೋರಥರಾಗದೆ; ಈ ಮಹಾಕೃತಿ ರಚನೆಗೈದು ವಿಶ್ವಾದ್ಯಂತ ಪ್ರಕಾಶಗೊಳಿಸಲು ಸಿದ್ಧರಾಗಿ, ತನ್ಮೂಲಕ ಜನತೆಯ ಜಡಭಾವವನ್ನು ಕಳೆದು, ಹೃದಯದ ಕತ್ತಲೆಯ ಹೃದ್ಗ್ರಂಥಿಗಳನ್ನು ಭೇಧಿಸಿ, ಸರ್ವರನ್ನೂ ನಿಜಧರ್ಮದ ಹೊಂಬೆಳಗಿನಿಂದ ಪ್ರಜ್ಞಾನಾನಂದಮಯರನ್ನಾಗಿಮಾಡಿ, ಶ್ರೀಮಹಾಗುರುವರೇಣ್ಯರ ದಿವ್ಯಕೃಪಾನುಗ್ರಹಕ್ಕೆ ಪಾತ್ರರಾಗಬೇಕೆಂದು ವಿಶ್ವಧರ್ಮದ ಹೆಸರಿನಲ್ಲಿ ಸವಿನಯಪೂರ್ವಕ ಪ್ರಾರ್ಥಿಸುತ್ತೇನೆ. ಶಾಂತಂ ಶಿವಂ.

॥ ಸರ್ವೇ ಜನಾಃ ಸುಖಿನೋ ಭವಂತು ।
ಲೋಕಾಸ್ಸಮಸ್ತಾ ಸನ್ಮಂಗಳಾನಿ ಭವಂತು ॥

ಬೆಂಗಳೂರು—2
19-9-1974

ಟಿ. ಬಿ. ಬಸವರಾಜಯ್ಯ
c/o ಶ್ರೀ ಎಚ್. ರುದ್ರಯ್ಯ ಅಂಡ್ ಸನ್ಸ್
ಮರ್ಚೆಂಟ್ಸ್ ಅಂಡ್ ಇಂಡಸ್ಟ್ರಿಯಲಿಸ್ಟ್ಸ್,
ಹೊಸತರಗುಪೇಟೆ, ಬೆಂಗಳೂರು—2

॥ ಶರೀರ ಮಾದ್ಯಂ ಖಲು ಧರ್ಮ ಸಾಧನಂ ॥
॥ ಶಿವಂ ಭೂಯಾತ್ ॥

ಶ್ರೀ

|| ಭ್ರಮನ್ವನಾಂತೇ ನವ ಮಂಜರೀಷು |

ನ ಷಟ್ಪದೋ ಗಂಧ ಫಲೀ ಮಜಿಘ್ರತ್ ||

ಸಾ ಕಿಂ ನರಮ್ಯ |

ಸ ಚ ಕಿಂ ನ ರಂತೌ |

ಬಲೀಯಸೀ ಕೇವಲ ಮೀಶ್ವರೇಚ್ಛಾ ||

ಆಗತಾನೆ ಅರಳಿ ಮಘಮಘಿಸುವ ಕಮಲವು ಮಕರಂಧವನ್ನು ಹೊಸೂಸುತ್ತಲಿದೆ. ಮಕರಂಧ ಗ್ರಹಣದಲ್ಲಿ ಸಹಜವಾಗಿ ಜಾಣ್ಮೆಯುಳ್ಳ ಭ್ರಮರ ಕಮಲದ ಸುತ್ತಲೂ ಅನೇಕ ಬಾರಿ "ಹ್ರೀಂಕಾರ" ಧ್ವನಿಯಿಂದ ಹಾರಾಡಿದಾಗ್ಯೂ ಆ ರಮಣೀಯ ಪುಷ್ಪವನ್ನು ಸ್ಪರ್ಶಿಸಲೂಯಿಲ್ಲ, ಮಧುರವಾದ ಮಕರಂಧವನ್ನು ಪಾನಮಾಡಲೂಯಿಲ್ಲ. ರಸಿಕ ಗುಣವುಳ್ಳ ದುಂಬಿ ಈ ರೀತಿ ವಿಮುಖದಿಂದಿರುವುದನ್ನು ಕಂಡ ರಸಿಕಜ್ಞನು ಭಾವಿಸಿದ್ದೇನೆಂದರೆ, ಅದಕ್ಕೆ ಮಕರಂಧ ಪಾನ ಮಾಡುವ ಬಗ್ಗೆ|| ಬಲೀಯಸೀ ಕೇವಲ ಮೀಶ್ವರೇಚ್ಛಾ|| ಈಶ್ವರನ ಒಲುಮೆ ಯಿಲ್ಲವೆಂದು ಭಾವಿಸಿದನು.

॥ಶ್ರೀ ಗುರುಭ್ಯೋ ನಮಃ॥

॥ಏಕ ಏವ ಶಿವ ಸ್ಸಾಕ್ಷಾತ್ಸರ್ವಾ
ನುಗ್ರಹ ಕಾರಕಃ।
ಗುರು ಜಂಗಮ ಲಿಂಗಾತ್ಮಾ।
ವರ್ತತೇ ಭುಕ್ತಿ ಮುಕ್ತಿದಃ॥

॥ಯಥಾ ಗುರೌ ಯಥಾ ಲಿಂಗೇ।
ಭಕ್ತಿರ್ಮಾರ್ಗ ಪರಿವರ್ತತೇ।
ಜಂಗಮೇ ಚ ತಥಾ ನಿತ್ಯಂ।
ಭಕ್ತಿಂ ಕುರ್ಯಾ ರ್ಧ್ವಿಜ ಷಣಃ॥

॥ಏಕ ಮೂರ್ತಿ ಸ್ತ್ರಯೋ ಭಾರ್ಗಂ।
ಗುರು ರ್ಲಿಂಗಂತು ಜಂಗಮಃ।
ಉಪಾಸಕಾನಾಂ ಕಾರ್ಯಾರ್ಥಂ।

ಬ್ರಹ್ಮಣೋ ರೂಪಕಲ್ಪನಾ।